ಶ್ರೀವಾದೀಂದ್ರತೀರ್ಥ ವಿರಚಿತಂ

# ಶ್ರೀಗುರುಗುಣ ಸ್ತವನಮ್

(ಕನ್ನಡ ಅನುವಾದ ಸಹಿತ)



ಅನುವಾದಕರು :

ವಿದ್ವಾನ್ ಜಿ. ಗುರುವೆಂಕಟಾಚಾರ್ಯ ಎಂ.ಎ.

ಶ್ರೀವಾದೀಂದ್ರತೀರ್ಥ ವಿರಚಿತಂ

# ಶ್ರೀಗುರುಗುಣಸ್ತವನಮ್

(ಕನ್ನಡ ಅನುವಾದ ಸಹಿತ)

ಅನುವಾದಕರು :
ವಿದ್ವಾನ್ ಜಿ. ಗುರುವೆಂಕಟಾಚಾರ್ಯರು ಎಂ.ಎ.
ಪ್ರಾಧ್ಯಾಪಕರು, ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು.

ಪ್ರಕಾಶಕರು :
ಶ್ರೀ ಗುರುರಾಜ ಅಸೋಸಿಯೇಷನ್ (ರಿ.)
ಮಾಡೆಲ್ ಹೌಸ್ ಬೀದಿ, ಬಸವನಗುಡಿ,
ಬೆಂಗಳೂರು-560 004.

**ಶ್ರೀಗುರುಗುಣಸ್ತವನಮ್** (ಕನ್ನಡಾನುವಾದ ಸಹಿತ)

ಅನುವಾದ ಮತ್ತು ವಿವರಣೆ : **ಜಿ. ಗುರುವೆಂಕಟಾಚಾರ್ಯ** ಎಂ.ಎ. ವಿದ್ವಾನ್

ಪ್ರಕಾಶಕರು : **ಶ್ರೀ ಗುರುರಾಜ ಅಸೋಸಿಯೇಷನ್ (ರಿ.)**
ಮಾಡೆಲ್‌ಹೌಸ್ ಬೀದಿ, ಬಸವನಗುಡಿ,
ಬೆಂಗಳೂರು-560 004.

ಪ್ರಥಮ ಮುದ್ರಣ : 1999

ಪ್ರತಿಗಳು : 1,000



ಪುಟಗಳು : 60 + 10

ಬೆಲೆ : ರೂ.

ಅಕ್ಷರವಿನ್ಯಾಸ : ಪೂರ್ಣಪ್ರಜ್ಞ ಸಂಶೋಧನ ಮಂದಿರ
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು-28

ಮುದ್ರಣ : ಲಾವಣ್ಯ ಮುದ್ರಣಾಲಯ
ಬೆಂಗಳೂರು.

# ಮುನ್ನುಡಿ

ಜ್ಞಾನಿವರ್ಯರೂ, ಭಕ್ತರ ಪಾಲಿಗೆ ಕಾಮಧೇನು - ಕಲ್ಪವೃಕ್ಷರೆಂದೂ ಪ್ರಖ್ಯಾತರಾದ ಶ್ರೀ ರಾಘವೇಂದ್ರ ಸ್ವಾಮಿಗಳನ್ನು ಕುರಿತಾದ ಸಂಸ್ಕೃತದ ಸ್ತೋತ್ರಗಳಲ್ಲಿ ಅತ್ಯಂತ ಪ್ರಮುಖವಾದದ್ದು ಎರಡು. ಒಂದು, ಶ್ರೀ ರಾಘವೇಂದ್ರ ಸ್ವಾಮಿಗಳು ಬೃಂದಾವನ ಪ್ರವೇಶ ಮಾಡಿದ ಸಂದರ್ಭದಲ್ಲಿ ಅವರ ಪ್ರಿಯ ಶಿಷ್ಯರಾದ ಶ್ರೀ ಅಪ್ಪಣ್ಣಾಚಾರ್ಯರು ಭಕ್ತಿಪರವಶರಾಗಿ ಅತ್ಯಂತ ಭಾವುಕತೆಯಿಂದ ರಚಿಸಿದ ಸ್ತೋತ್ರ. ಇನ್ನೊಂದು, ಅವರ ಪ್ರಶಿಷ್ಯರಾದ, ಪೂರ್ವಾಶ್ರಮದ ಸಂಬಂಧಿಕರಾದ ಶ್ರೀ ವಾದೀಂದ್ರತೀರ್ಥ ಶ್ರೀಪಾದಂಗಳವರು ರಚಿಸಿದ ಶ್ರೀಗುರುಗುಣಸ್ತವನ. ಶ್ರೀ ಅಪ್ಪಣ್ಣಾಚಾರ್ಯರು ರಚಿಸಿದ ಸ್ತೋತ್ರ ಲಕ್ಷಾಂತರ ಭಕ್ತರ ಬಾಯಲ್ಲಿ ನಲಿಯುವ ಸ್ತೋತ್ರವಾಗಿದ್ದು ಶ್ರೀ ರಾಘವೇಂದ್ರ ಸ್ವಾಮಿಗಳ ಅನುಗ್ರಹವನ್ನು ಬೇಡುವವರ ಪಾಲಿನ ಭಾಗ್ಯವೆಂದೆನಿಸಿದೆ.

ಹಾಗೆಯೇ, ಶ್ರೀವಾದೀಂದ್ರ ಸ್ವಾಮಿಗಳು ರಚಿಸಿದ ಶ್ರೀಗುರುಗುಣಸ್ತವನದ ವಿಶಿಷ್ಟತೆಯೂ ಅನನ್ಯ ಸಾಧಾರಣವಾದುದು. ಶ್ರೀ ಅಪ್ಪಣ್ಣಾಚಾರ್ಯರು ರಚಿಸಿದ ಸ್ತೋತ್ರಕ್ಕಿಂತಲೂ ದೀರ್ಘವಾದ ಈ ಸ್ತೋತ್ರವೂ ಭಕ್ತಿರಸ ಪರಿಪೂರಿತವಾಗಿದ್ದು ಅದರ ಶ್ರವಣಮಾತ್ರದಿಂದಲೇ ರೋಮಾಂಚನಗೊಳಿಸುವ ವಿಶಿಷ್ಟ ಸತ್ತ್ವವನ್ನು ಪಡೆದಿದೆ. ಅತ್ಯುತ್ಕೃಷ್ಟ ಕಾವ್ಯಗುಣವನ್ನು ಪಡೆದಿರುವ ಈ ಸ್ತೋತ್ರ ಸುಮನೋಹರ ಶೈಲಿಯಲ್ಲಿ ಭಗವಂತನ ಸ್ತೋತ್ರದಿಂದಾರಂಭಿಸಿ, ಶ್ರೀಮದಾಚಾರ್ಯರ ಮತ್ತು ಪರಂಪರೆಯಲ್ಲಿ ಬಂದ ಗುರುಗಳ ಸ್ತೋತ್ರವನ್ನೊಳಗೊಂಡಿದೆ. ಶ್ರೀರಾಘವೇಂದ್ರ ಸ್ವಾಮಿಗಳ ಸ್ತುತಿಯ ಜೊತೆಗೆ ಅವರ ಎಲ್ಲ ಗ್ರಂಥಗಳ, ಅವುಗಳ ವೈಶಿಷ್ಟ್ಯದ ಪರಿಚಯವನ್ನು ಮಾಡಿಕೊಡುವ ಈ ಸ್ತೋತ್ರ ಸ್ತೋತ್ರಸಾಹಿತ್ಯದಲ್ಲೇ ವಿಶಿಷ್ಟ ಸ್ಥಾನವನ್ನು ಪಡೆದಿರುವ ಸ್ತೋತ್ರವಾಗಿದೆ.

ಶ್ರವಣಪಠನಾದಿಗಳನ್ನು ಮಾಡುವವರಿಗೆ ಶ್ರೀರಾಘವೇಂದ್ರ ಸ್ವಾಮಿಗಳ ಅನುಗ್ರಹವನ್ನು ಕರುಣಿಸುವ ಇಂತಹ ದಿವ್ಯ ಸ್ತೋತ್ರವನ್ನು ನ್ಯಾಯವೇದಾಂತ

ಶಾಸ್ತ್ರಗಳಲ್ಲಿ ವಿಶಿಷ್ಟ ಪಾಂಡಿತ್ಯವನ್ನು ಪಡೆದಿರುವುದರ ಜೊತೆಗೆ ಭಾಗವತಾದಿ ಪುರಾಣಗಳನ್ನೂ ಆಳವಾಗಿ ಅಧ್ಯಯನ ಮಾಡಿ ವಿಶಿಷ್ಟ ಪ್ರವಚನಕಾರರೆಂದು ಹೆಸರು ಗಳಿಸಿರುವ, ಪೂರ್ಣಪ್ರಜ್ಞ ವಿದ್ಯಾಪೀಠದಲ್ಲಿ ಪ್ರಾಧ್ಯಾಪಕರಾಗಿರುವ ಶ್ರೀ ಗುರುವೆಂಕಟಾಚಾರ್ಯರು ಕನ್ನಡಕ್ಕೆ ಅನುವಾದ ಮಾಡಿ ಶ್ರೀರಾಯರ ಭಕ್ತರಿಗೆ ಪರಮೋಪಕಾರ ಮಾಡಿದ್ದಾರೆ. ಶ್ಲೋಕಗಳ ಪ್ರತಿಪದಾರ್ಥದ ಜೊತೆಗೆ ಅವುಗಳ ಸಾರವನ್ನು ಅತ್ಯಂತ ಚೊಕ್ಕವಾಗಿ ಸಂಗ್ರಹಿಸಿರುವುದು ಈ ಅನುವಾದದ ವಿಶೇಷವಾಗಿದೆ. ಇದಕ್ಕಾಗಿ ಅವರಿಗೆ ಶ್ರೀ ರಾಯರ ಭಕ್ತರೆಲ್ಲರೂ ಋಣಿಗಳಾಗಿದ್ದಾರೆ.

ಈ ಪುಸ್ತಕಪ್ರಕಾಶನದ ಹೊಣೆಯನ್ನು ಹೊತ್ತಿರುವ ಶ್ರೀ ಗುರುರಾಜ ಅಸೋಸಿಯೇಷನ್ ತಮ್ಮ ಈ ಕಾರ್ಯದ ಮೂಲಕ ಶ್ರೀ ರಾಯರ ವಿಶೇಷಾನುಗ್ರಹಕ್ಕೆ ಮತ್ತು ಶ್ರೀ ರಾಯರ ಭಕ್ತರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಹಿಂದಿನಿಂದಲೂ ಗ್ರಂಥಪ್ರಕಾಶನ ಕಾರ್ಯವನ್ನು ಶ್ರೀರಾಯರ ಸೇವಾರೂಪವಾಗಿ ನಡೆಸಿಕೊಂಡು ಬಂದಿರುವ ಈ ಸಂಸ್ಥೆ ಮುಂದೆಯೂ ಈ ಕಾರ್ಯವನ್ನು ನಿರಂತರ ವಾಗಿ ನಡೆಸುವರೆಂದು ಆಶಿಸುತ್ತೇನೆ.

28.08.1999
ತಿರುಪತಿ

ಪ್ರೊ। ಡಿ. ಪ್ರಹ್ಲಾದಾಚಾರ್ಯ
ಕುಲಪತಿಗಳು,
ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠ, ತಿರುಪತಿ.

# ಪ್ರಾಸ್ತಾವಿಕ

ಶ್ರೀಮನ್ ಮಧ್ವಾಚಾರ್ಯರು ಭೂಮಿಯಲ್ಲಿ ಅವತರಿಸಿ ದ್ವೈತ ಸಿದ್ಧಾಂತವನ್ನು ಸ್ಥಾಪಿಸಿ ಬದರಿಕಾಶ್ರಮಕ್ಕೆ ತೆರಳುವಾಗ ಈ ಸಿದ್ಧಾಂತವನ್ನು ಮುಂಬರುವ ನನ್ನ ಅನುಯಾಯಿಗಳು ಸಮೃದ್ಧಿಗೊಳಿಸಬೇಕೆಂದು ಆದೇಶಿಸಿದ್ದಾರೆ. ಅದರಂತೆ ಸತ್ ಸಿದ್ಧಾಂತದ ಸಮೃದ್ಧಿಗಾಗಿ ಅನೇಕ ಮಠ ಪರಂಪರೆಗಳು ಬಂದವು. ಅವುಗಳಲ್ಲಿ ಶ್ರೀಮದ್ ರಾಘವೇಂದ್ರ ಮಠದ ಪರಂಪರೆಯು ಒಂದು. ಅದು ಕೆಳಗಿನಂತಿದೆ. -

ಶ್ರೀ ಮನ್ ಮಧ್ವಾಚಾರ್ಯರು
ಶ್ರೀ ಪದ್ಮನಾಭತೀರ್ಥರು
ಶ್ರೀ ನರಹರಿತೀರ್ಥರು
ಶ್ರೀ ಮಾಧವತೀರ್ಥರು
ಶ್ರೀಮದಕ್ಷೋಭ್ಯತೀರ್ಥರು
ಶ್ರೀ ಜಯತೀರ್ಥರು
ಶ್ರೀ ವಿದ್ಯಾಧಿರಾಜತೀರ್ಥರು
ಶ್ರೀ ಕವೀಂದ್ರತೀರ್ಥರು
ಶ್ರೀ ವಾಗೀಶತೀರ್ಥರು
ಶ್ರೀ ರಾಮಚಂದ್ರತೀರ್ಥರು
ಶ್ರೀ ವಿಬುಧೇಂದ್ರತೀರ್ಥರು
ಶ್ರೀ ಜಿತಾಮಿತ್ರತೀರ್ಥರು
ಶ್ರೀ ರಘುನಂದನತೀರ್ಥರು
ಶ್ರೀ ಸುರೇಂದ್ರತೀರ್ಥರು
ಶ್ರೀ ವಿಜಯೀಂದ್ರತೀರ್ಥರು
ಶ್ರೀ ಸುಧೀಂದ್ರತೀರ್ಥರು
ಶ್ರೀ ಮದ್‌ರಾಘವೇಂದ್ರತೀರ್ಥರು
ಶ್ರೀ ಯೋಗೀಂದ್ರತೀರ್ಥರು

ಶ್ರೀ ಸೂರೀಂದ್ರತೀರ್ಥರು
ಶ್ರೀ ಸುಮತೀಂದ್ರತೀರ್ಥರು
ಶ್ರೀ ಉಪೇಂದ್ರತೀರ್ಥರು
ಶ್ರೀ ವಾದೀಂದ್ರತೀರ್ಥರು
ಶ್ರೀ ವಸುಧೇಂದ್ರತೀರ್ಥರು
ಶ್ರೀ ವರದೇಂದ್ರತೀರ್ಥರು
ಶ್ರೀ ಧೀರೇಂದ್ರತೀರ್ಥರು
ಶ್ರೀ ಭುವನೇಂದ್ರತೀರ್ಥರು
ಶ್ರೀ ಸುಬೋಧೇಂದ್ರತೀರ್ಥರು
ಶ್ರೀ ಸುಜನೇಂದ್ರತೀರ್ಥರು
ಶ್ರೀ ಸುಜ್ಞಾನೇಂದ್ರತೀರ್ಥರು
ಶ್ರೀ ಸುಧರ್ಮೇಂದ್ರತೀರ್ಥರು
ಶ್ರೀ ಸುಗುಣೇಂದ್ರತೀರ್ಥರು
ಶ್ರೀ ಸುಪ್ರಜ್ಞೇಂದ್ರತೀರ್ಥರು
ಶ್ರೀ ಸುಕೃತೀಂದ್ರತೀರ್ಥರು
ಶ್ರೀ ಸುಶೀಲೇಂದ್ರತೀರ್ಥರು
ಶ್ರೀ ಸುವ್ರತೀಂದ್ರತೀರ್ಥರು
ಶ್ರೀ ಸುಯಮೀಂದ್ರತೀರ್ಥರು
ಶ್ರೀ ಸುಜಯೀಂದ್ರತೀರ್ಥರು
ಶ್ರೀ ಸುಶಮೀಂದ್ರತೀರ್ಥರು (ಪ್ರಸ್ತುತ ಪೀಠಾಧಿಪತಿಗಳು)

ಈ ಪರಂಪರೆಯಲ್ಲಿ ಶ್ರೀಮಧ್ವಾಚಾರ್ಯರಿಂದ 15 ನೆಯವರಾದ ಶ್ರೀಮದ್ ರಾಘವೇಂದ್ರತೀರ್ಥರು ಈ ಗುರುಗುಣಸ್ತವನ ಎಂಬ ಕಿರು ಕಾವ್ಯದ ನಾಯಕರು. ಅವರಿಂದ 5 ನೆಯವರಾದ ಶ್ರೀವಾದೀಂದ್ರತೀರ್ಥರು ಕವಿಗಳು. ಇವರು ಪೂರ್ವಾಶ್ರಮದಲ್ಲಿ ರಾಘವೇಂದ್ರಸ್ವಾಮಿಗಳ ಮರಿಮಕ್ಕಳಾದ ಶ್ರೀನಿವಾಸಾಚಾರ್ಯರು. ಇವರು ತಮ್ಮ ತಂದೆಯವರಾದ ಪುರುಷೋತ್ತಮಾಚಾರ್ಯರಲ್ಲಿ

ಸಾಹಿತ್ಯವನ್ನು ಸುಮತೀಂದ್ರತೀರ್ಥರು ಹಾಗೂ ಉಪೇಂದ್ರತೀರ್ಥರಲ್ಲಿ ನ್ಯಾಯ ವೇದಾಂತಗಳನ್ನು ಅಧ್ಯಯನ ಮಾಡಿದರು. ನವ್ಯದುರುಕ್ತಿ ಶಿಕ್ಷಾ ಎಂಬ ಗ್ರಂಥವನ್ನು ರಚಿಸಿದ್ದರು.

ಇವರ ಪಾಂಡಿತ್ಯ ಮತ್ತು ವೈರಾಗ್ಯ ಮೊದಲಾದ ಗುಣಗಳಿಗೆ ಮೆಚ್ಚಿ ಉಪೇಂದ್ರ ತೀರ್ಥರು ಇವರನ್ನು ತಮ್ಮ ಸಂಸ್ಥಾನಾಧಿಪತಿಗಳನ್ನಾಗಿ ಮಾಡಿ ವಾದೀಂದ್ರತೀರ್ಥರು ಎಂದು ನಾಮಕರಣ ಮಾಡಿದರು. ಆದ್ದರಿಂದಲೇ ಇವರು 'ಶ್ರೀರಾಘವೇಂದ್ರಾರ್ಯ ಉಭಯವಂಶಾಬ್ಧಿಚಂದ್ರಮರು' ಎಂದು ಪ್ರಸಿದ್ಧರಾದರು. ಇವರು ಕ್ರಿ.ಶ. 1728 ರಿಂದ 1750 ರ ವರೆಗೆ ಸಂಸ್ಥಾನವನ್ನು ಆಳುತ್ತಾ ಮೀಮಾಂಸಾನಯದರ್ಪಣ, ತತ್ತ್ವೋದ್ಯೋತಟಿಪ್ಪಣಿ, ಭೂಗೋಳಖಗೋಳವಿಚಾರ, ಶ್ರೀಗುರುಗುಣ ಸ್ತವನಮ್, ಶ್ರೀರಾಘವೇಂದ್ರಮಠಗತಾರ್ಚಾಗತಿಕ್ರಮ ಇತ್ಯಾದಿ ಗ್ರಂಥಗಳನ್ನು ರಚಿಸಿ ಸಿದ್ಧಾಂತವನ್ನು ಊರ್ಜಿತಗೊಳಿಸಿದರು. ಆಗಿನ ಕಾಲದ ರಾಜಕೀಯದಿಂದ ಕೈತಪ್ಪಿ ಹೋಗುವ ಪರಿಸ್ಥಿತಿಯಲ್ಲಿದ್ದ ಕರೀಟಗಿರಿ, ಮಂತ್ರಾಲಯ ಗ್ರಾಮಗಳನ್ನು ತಮ್ಮ ವರ್ಚಸ್ಸಿನಿಂದ ಮಠಕ್ಕೆ ಉಳಿಸಿಕೊಂಡರು. ಕ್ರಿ.ಶ. 1757 ರಲ್ಲಿ ತಮ್ಮ ಪೂರ್ವಾಶ್ರಮದ ಸಹೋದರರಾದ ವೇಣುಗೋಪಾಲಾಚಾರ್ಯರ ಜ್ಯೇಷ್ಠ ಪುತ್ರರಾದ ಪುರುಷೋತ್ತಮಾಚಾರ್ಯರಿಗೆ ಸನ್ಯಾಸಾಶ್ರಮ ಕೊಟ್ಟು ಮಂತ್ರಾಲಯದಲ್ಲಿ ರಾಯರ ಪಕ್ಕದಲ್ಲಿಯೇ ಬೃಂದಾವನಸ್ಥರಾದರು. ದಿವಾನ ವೆಂಕಣ್ಣಪಂತನು ರಾಯರಿಗಾಗಿ ತಯಾರಿಸಿದ್ದ ಬೃಂದಾವನವನ್ನು ರಾಯರ ಆಜ್ಞೆಯಂತೆ ವಾದೀಂದ್ರರಿಗಾಗಿ ಕಾಯ್ದಿರಿಸಿದ್ದರಂತೆ. ಅದೇ ಬೃಂದಾವನದಲ್ಲಿ ವಾದೀಂದ್ರರು ಪ್ರವೇಶಿಸಿದ್ದು ಇವರ ವೈಶಿಷ್ಟ್ಯವಾಗಿದೆ.

ಪ್ರಸ್ತುತವಾದ ಈ ಕಿರುಕೃತಿಯಲ್ಲಿ ಕವಿಗಳು ಶ್ರೀವಿಷ್ಣು, ಜಗನ್ಮಾತೆ ಲಕ್ಷ್ಮೀದೇವಿ, ಮುಖ್ಯಪ್ರಾಣ, ಆಚಾರ್ಯಮಧ್ವರು, ಟೀಕಾಚಾರ್ಯರು, ವಿಬುಧೇಂದ್ರರು, ವ್ಯಾಸರಾಜರು, ವಿಜಯೀಂದ್ರರು, ಸುಧೀಂದ್ರರು, ರಾಘವೇಂದ್ರರು ಇವರನ್ನು ವಿಶಿಷ್ಟವಾಗಿ ಆಲಂಕಾರಿಕವಾಗಿ ಸ್ತುತಿಸಿ ಕರ್ಮಯೋಗ, ಜ್ಞಾನಯೋಗದಲ್ಲಿ ಅಶಕ್ತರಾದ ತಾವು ಗುರುಪ್ರಸಾದ ಸಂಪಾದನೆಗಾಗಿ ಈ ಕೃತಿಯನ್ನು ರಚಿಸಿರುವುದಾಗಿ

ತಿಳಿಸಿದ್ದಾರೆ. ಈ ಕೃತಿಯಲ್ಲಿ ಗುರುಗಳು ರಚಿಸಿದ ಗ್ರಂಥಗಳಲ್ಲಿ ಕೆಲವು ಪ್ರಮುಖ ಗ್ರಂಥಗಳ ಮಹಿಮೆಯನ್ನು ಆಲಂಕಾರಿಕವಾಗಿ ಬಣ್ಣಿಸಲಾಗಿದೆ. ರಾಯರ ಚರಿತ್ರೆ ಹಾಗೂ ಗ್ರಂಥಗಳ ಮಹಿಮೆ ಅಪಾರವಾಗಿದ್ದರೂ ಇಲ್ಲಿರುವ ಲೇಶವರ್ಣನೆಯು ಸಮುದ್ರಸ್ನಾನದಂತೆ ಖಂಡಿತವಾಗಿಯೂ ಸಫಲವಾಗುತ್ತದೆಂದು ಅವರ ನಂಬಿಕೆ.

ಇಂತಹ ಈ ವಿಶಿಷ್ಟ ಕಿರುಕಾವ್ಯದ ಕನ್ನಡಾನುವಾದ ಮಾಡುವ ಸೇವೆಯನ್ನು ಅಲ್ಪನಾದ ನನಗೆ ಕಲ್ಪಿಸಿಕೊಟ್ಟ ಬೆಂಗಳೂರು ನಗರದ ಎನ್.ಆರ್. ಕಾಲೋನಿ, ಮಾಡೆಲ್ ಹೌಸ್ ಬೀದಿಯ ಗುರುರಾಜ ಅಸೋಸಿಯೇಷನ್‌ನವರಿಗೂ ಹಾಗೂ ಇದಕ್ಕೆ ಮುನ್ನುಡಿಯನ್ನು ಕರುಣಿಸಿದ ತಿರುಪತಿ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠದ ಕುಲಪತಿಗಳೂ, ಪಂಡಿತೋತ್ತಮರೂ ಹಾಗೂ ನನ್ನ ಗುರುಗಳೂ ಆದ ವಿದ್ವಾನ್ ಡಿ. ಪ್ರಹ್ಲಾದಾಚಾರ್ಯರಿಗೂ ನಾನು ಕೃತಜ್ಞನಾಗಿದ್ದೇನೆ.

28.08.1999
ಬೆಂಗಳೂರು

**ಜಿ. ಗುರುವೆಂಕಟಾಚಾರ್ಯ**
ಪ್ರಾಧ್ಯಾಪಕರು,
ಪೂರ್ಣಪ್ರಜ್ಞ ವಿದ್ಯಾಪೀಠ, ಬೆಂಗಳೂರು.

# ಪ್ರಕಾಶಕರ ನುಡಿ

ಪ್ರಸ್ತುತ ಪ್ರಮಾಥಿನಾಮ ಸಂವತ್ಸರದ ಗುರುಸಾರ್ವಭೌಮರ ಆರಾಧನಾ ಸಂದರ್ಭದಲ್ಲಿ ಅವರ ಕೃತಿಗಳ ಕುರಿತಾದ ಶ್ರೀವಾದೀಂದ್ರತೀರ್ಥ ವಿರಚಿತ ಶ್ರೀ ಗುರುಗುಣ ಸ್ತವನವನ್ನು ಪ್ರಕಟಿಸಬೇಕೆಂದು ಶ್ರೀಹರಿವಾಯುಗಳ ಪ್ರೇರಣಾನುಸಾರ ನಿಶ್ಚಯಿಸಿ ಆಡಳಿತ ಮಂಡಳಿಯು ಗ್ರಂಥಪ್ರಕಾಶನ ಉಪಸಮಿತಿಯೊಂದನ್ನು ರಚಿಸಿತು. ಉಪಸಮಿತಿಯವರು ಅದರ ಕನ್ನಡಾನುವಾದವನ್ನು ಮಾಡಲು ಪೂರ್ಣಪ್ರಜ್ಞ ವಿದ್ಯಾಪೀಠದ ಪ್ರಾಧ್ಯಾಪಕರಾದ ಮ.ಶಾ.ಸಂ. ವಿದ್ವಾನ್ ಜಿ. ಗುರುವೆಂಕಟಾಚಾರ್ಯರನ್ನು ಕೇಳಿದಾಗ ಅವರು ಸಂತೋಷದಿಂದ ಒಪ್ಪಿ ಕನ್ನಡಾನುವಾದ ಮಾಡಿ ಈ ಗ್ರಂಥವನ್ನು ಸಂಪಾದಿಸಿ ಗುರುರಾಜರ ಅನುಗ್ರಹಕ್ಕೆ ಪಾತ್ರರಾಗಿದ್ದಾರೆ. ಅವರಿಗೆ ಅನಂತ ನಮಸ್ಕಾರಗಳು. ಮುನ್ನುಡಿಯನ್ನು ಕರುಣಿಸಿದ ತಿರುಪತಿಯ ರಾಷ್ಟ್ರೀಯ ಸಂಸ್ಕೃತ ವಿದ್ಯಾಪೀಠದ ಕುಲಪತಿಗಳಾದ ಪ್ರೊ। ಡಿ. ಪ್ರಹ್ಲಾದಾಚಾರ್ಯರಿಗೂ ನಮಸ್ಕಾರಗಳು.

ಈ ಗ್ರಂಥಪ್ರಕಟಣೆಗೆ ನೆರವಾದ ಶ್ರೀ ಚೈತ್ರ ರಾಘವೇಂದ್ರರಾಯರಿಗೆ ಶ್ರೀ ಹರಿವಾಯುಗುರುಗಳು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಈ ಗ್ರಂಥಪ್ರಕಟಣೆಗೆ ಪ್ರತ್ಯಕ್ಷ ಹಾಗೂ ಪರೋಕ್ಷವಾಗಿ ಸಹಕರಿಸಿದವರಿಗೆ ಗುರುರಾಜರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ. ಅಕ್ಷರಜೋಡಣೆ ಮಾಡಿದ ಪೂರ್ಣಪ್ರಜ್ಞ ಸಂಶೋಧನ ಮಂದಿರದವರಿಗೂ ಮುದ್ರಿಸಿದ ಲಾವಣ್ಯ ಮುದ್ರಣಾಲಯದವರಿಗೂ ನಮ್ಮ ಅಭಿನಂದನೆಗಳನ್ನು ಸಲ್ಲಿಸುತ್ತಾ ಶ್ರೀ ರಾಘವೇಂದ್ರಾಂತರ್ಗತ ಮಧ್ವಪತಿ ಶ್ರೀಮನ್ಮೂಲರಾಮಚಂದ್ರದೇವರಲ್ಲಿ ಇದನ್ನು ಸಮರ್ಪಿಸುತ್ತೇವೆ.

28.08.1999
ಬೆಂಗಳೂರು

ಆಡಳಿತ ಮಂಡಳಿ ಹಾಗೂ ಉಪಸಮಿತಿ ಸದಸ್ಯರು
ಶ್ರೀ ಗುರುರಾಜ ಅಸೋಸಿಯೇಷನ್
ಎನ್. ಆರ್. ಕಾಲೋನಿ, ಬೆಂಗಳೂರು.

# श्रीगुरुगुणस्तवनम

# ಶ್ರೀಗುರುಗುಣ ಸ್ತವನಮ್

*ಮಂಗಳಪದ್ಯ (ಶ್ರೀರಮಣನ ಸ್ತುತಿ)*

उन्मीलन्नीलनीरेरुहनिवहमहःपुष्टिमुष्टिंधयिश्रीः
श्रीभूदुर्गादृगन्तप्रचयपरिचयोदारकिर्मीरभावः ।
स्वैरक्षीरोदनिर्यच्छशिरुचिनिचयाखर्वगर्वापनोदी
पातु श्रीनेतुरस्मान् सपदि बुधजनत्राणदक्षः कटाक्षः ॥ १ ॥

ಉನ್ಮೀಲನ್ನೀಲನೀರೇರುಹನಿವಹಮಹಃಪುಷ್ಟಿಮುಷ್ಟಿಂಧಯಿಶ್ರೀಃ
ಶ್ರೀಭೂದುರ್ಗಾದೃಗಂತಪ್ರಚಯಪರಿಚಯೋದಾರಕಿರ್ಮೀರಭಾವಃ ।
ಸ್ವೈರಕ್ಷೀರೋದನಿರ್ಯಚ್ಛಶಿರುಚಿನಿಚಯಾಖರ್ವಗರ್ವಾಪನೋದೀ
ಪಾತು ಶ್ರೀನೇತುರಸ್ಮಾನ್ ಸಪದಿ ಬುಧಜನತ್ರಾಣದಕ್ಷಃ ಕಟಾಕ್ಷಃ ॥ 1 ॥

*ಅನ್ವಯಾರ್ಥ :*

ಉನ್ಮೀಲನ್ನೀಲನೀರೇರುಹನಿವಹಮಹಃಪುಷ್ಟಿಮುಷ್ಟಿಂಧಯಿಶ್ರೀಃ - ಉನ್ಮೀಲತ್= ಅರಳುತ್ತಿರುವ ನೀಲನೀರೇರುಹ= ನೀಲಕಮಲಗಳ ನಿವಹ= ಸಮೂಹದ, ಮಹಃಪುಷ್ಟಿ= ಕಾಂತಿಸಮೃದ್ಧಿಯನ್ನು, ಮುಷ್ಟಿಂಧಯಿ= ಮುಷ್ಟಿಯಿಂದ ಪಾನ ಮಾಡುವ (ಹೀರುವ), ಶ್ರೀಃ= ಕಾಂತಿಯುಳ್ಳ, ಶ್ರೀಭೂದುರ್ಗಾದೃಗಂತ-ಪ್ರಚಯಪರಿಚಯೋದಾರಕಿರ್ಮೀರಭಾವಃ - ಶ್ರೀ= ಶ್ರೀದೇವಿಯು, ಭೂ= ಭೂದೇವಿಯು, ದುರ್ಗಾ= ದುರ್ಗಾದೇವಿಯು ಇವರುಗಳ, ದೃಗಂತ= ಕಡೆ ಗಣ್ಣಿನ, ಪ್ರಚಯಪರಿಚಯ= ಅಧಿಕಸಹವಾಸದಿಂದ, ಉದಾರ= ಉತ್ಕೃಷ್ಟವಾದ, ಕಿರ್ಮೀರ-

ಭಾವಃ= ಚಿತ್ರವರ್ಣವುಳ್ಳ, ಸ್ವೈರಕ್ಷೀರೋದನಿರ್ಯಚ್ಛಶಿರುಚಿನಿಚಯಾಖರ್ವ-ಗರ್ವಾಪನೋದೀ- ಸ್ವೈರ= ಸ್ವತಂತ್ರವಾಗಿ, ಕ್ಷೀರೋದ= ಕ್ಷೀರ ಸಮುದ್ರದಿಂದ, ನಿರ್ಯತ್= ಮೇಲೆ ಬಂದ, ಶಶಿ= ಚಂದ್ರನ, ರುಚಿ= ಕಾಂತಿಯ, ನಿಚಯ= ಸಮೂಹದ, ಅಖರ್ವ= ಬಹಳವಾದ, ಗರ್ವ= ಅಹಂಕಾರವನ್ನು, ಅಪನೋದೀ= ನಿರಾಕರಿಸುವ, ಬುಧಜನತ್ರಾಣದಕ್ಷಃ - ಬುಧಜನ= ಜ್ಞಾನಿಜನರ, ತ್ರಾಣ= ರಕ್ಷಣೆಯಲ್ಲಿ, ದಕ್ಷಃ= ಸಮರ್ಥವಾದ, ಶ್ರೀನೇತುಃ= ಲಕ್ಷ್ಮೀಪತಿಯಾದ ಶ್ರೀರಾಮನ, ಕಟಾಕ್ಷಃ= ನೋಟವು, ಅಸ್ಮಾನ್= ನಮ್ಮನ್ನು, ಪಾತು= ರಕ್ಷಿಸಲಿ.

*ಭಾವಾರ್ಥ :*

ಅರಳುತ್ತಿರುವ ನೀಲಕಮಲಗಳಿಗಿಂತಲೂ ಮಿಗಿಲಾಗಿ ಶೋಭಾಯ-ಮಾನವಾದ, ಶ್ರೀಭೂದುರ್ಗೆಯರ ಕಡೆಗಣ್ಣಿನ ಕುಡಿನೋಟದಿಂದೊ-ಡಗೂಡಿ ಚಿತ್ರವರ್ಣದ್ದಾದ, ಕ್ಷೀರಸಮುದ್ರದಿಂದ ಉದಿಸಿದ ಚಂದ್ರನ ಕಾಂತಿಗಿಂತಲೂ ಅಧಿಕವಾಗಿ ಆನಂದವನ್ನುಂಟುಮಾಡುವ, ಜ್ಞಾನಿಜನರನ್ನು ಕಾಪಾಡುವ ಶ್ರೀವಿಷ್ಣುಕಟಾಕ್ಷವು ನಮ್ಮನ್ನು ಕಾಪಾಡಲಿ.

### ಲಕ್ಷ್ಮೀಸ್ತುತಿ

मातस्त्वामुपकल्पिताखिलजगत्सर्गेऽजभर्गेडिते
चेतो न प्रजहातु जातुचिदिह स्वर्गेऽपवर्गेऽपि नः ।
लावण्यादधरीकृतामरवधूवर्गे निसर्गेहितं
कारुण्यं कुरु माकृथा मयि पुनर्दुर्गे विसर्गे मतिम् ॥ २ ॥

**ಮಾತಸ್ತ್ವಾಮುಪಕಲ್ಪಿತಾಖಿಲಜಗತ್ಸರ್ಗೇಽಜಭರ್ಗೇಡಿತೇ**
**ಚೇತೋ ನ ಪ್ರಜಹಾತು ಜಾತುಚಿದಿಹ ಸ್ವರ್ಗೇಽಪವರ್ಗೇಽಪಿ ನಃ ।**

**ಲಾವಣ್ಯಾದಧರೀಕೃತಾಮರವಧೂವರ್ಗೇ ನಿಸರ್ಗೇಹಿತಂ**
**ಕಾರುಣ್ಯಂ ಕುರು ಮಾಕೃಥಾ ಮಯಿ ಪುನರ್ದುರ್ಗೇ ವಿಸರ್ಗೇ ಮತಿಂ ॥ 2 ॥**

*ಅನ್ವಯಾರ್ಥ :*

**ಉಪಕಲ್ಪಿತಾಖಿಲಜಗತ್ಸರ್ಗೇ - ಉಪಕಲ್ಪಿತ= ಮಾಡಲ್ಪಟ್ಟ, ಅಖಿಲ= ಎಲ್ಲ, ಜಗತ್= ಪ್ರಪಂಚದ, ಸರ್ಗೇ= ಸೃಷ್ಟಿಯುಳ್ಳ, ಅಜಭರ್ಗೇಡಿತೇ - ಅಜ= ಬ್ರಹ್ಮದೇವರು, ಭರ್ಗ= ರುದ್ರದೇವರು ಇವರುಗಳಿಂದ, ಈಡಿತೇ= ಸ್ತುತಿಸಲ್ಪಟ್ಟ, ಲಾವಣ್ಯಾತ್= ಸೌಂದರ್ಯದಿಂದ, ಅಧರೀಕೃತಾಮರವಧೂವರ್ಗೇ - ಅಧರೀಕೃತ= ತಿರಸ್ಕರಿಸಲ್ಪಟ್ಟ, ಅಮರವಧೂ= ದೇವ ಸ್ತ್ರೀಯರ, ವರ್ಗೇ= ಸಮೂಹವುಳ್ಳ, ಮಾತಃ= ತಾಯಿಯಾದ, ದುರ್ಗೇ= ದುರ್ಗಾದೇವಿಯೇ!, ಜಾತುಚಿದಪಿ= ಯಾವಾಗಲೂ, ನಃ= ನಮ್ಮ, ಚೇತಃ= ಮನಸ್ಸು, ತ್ವಾಂ= ನಿನ್ನನ್ನು, ಇಹ= ಈ ಭೂಲೋಕದಲ್ಲಾಗಲೀ, ಸ್ವರ್ಗೇ= ಸ್ವರ್ಗದಲ್ಲಿಯಾಗಲೀ, ಅಪವರ್ಗೇಪಿ= ಮೋಕ್ಷದಲ್ಲಿಯಾಗಲೀ, ನ ಜಹಾತು= ಬಿಡದಿರಲಿ. ಮಯಿ= ನನ್ನಲ್ಲಿ, ನಿಸರ್ಗೇಹಿತಂ= ಸ್ವಭಾವದಿಂದ ಅಪೇಕ್ಷಿತವಾದ, ಕಾರುಣ್ಯಂ= ಕರುಣೆಯನ್ನು, ಕುರು= ಮಾಡು. ಪುನಃ= ಹಾಗೆಯೇ, ದುರ್ಗೇ= ಕಷ್ಟಕಾಲದಲ್ಲಿ, ವಿಸರ್ಗೇ= ಕೈಬಿಡುವಿಕೆಯಲ್ಲಿ, ಮತಿಂ= ಬುದ್ಧಿಯನ್ನು, ಮಾ ಕೃಥಾಃ= ಮಾಡಬೇಡ.**

ಭಾವಾರ್ಥ :

ಅಖಿಲಜಗತ್ತನ್ನು ಸೃಷ್ಟಿ ಮಾಡಿ ಲೋಕಮಾತೆಯೆನಿಸಿದ, ದೇವಸ್ತ್ರೀಯರಿಗಿಂತಲೂ ಮಿಗಿಲಾದ ಸೌಂದರ್ಯ ಭರಿತಳಾದ, ಬ್ರಹ್ಮರುದ್ರರಿಂದ ಸ್ತುತ್ಯಳಾದ, ಲಕ್ಷ್ಮೀದೇವಿಯೇ ! ನಾನು ಭೂಲೋಕದಲ್ಲಿರಲಿ, ಸ್ವರ್ಗದಲ್ಲಿರಲಿ ಮುಕ್ತಿಯಲ್ಲಿರಲಿ ಎಲ್ಲಿದ್ದರೂ ನನ್ನ ಮನಸ್ಸು ಎಂದೂ ನಿನ್ನನ್ನು ಮರೆಯದಿರಲಿ. ಸ್ವಭಾವತಃ ನಮಗೆ ಅಪೇಕ್ಷಿತವಾದ ನಿನ್ನ ಕಾರುಣ್ಯ ನಮ್ಮ ಮೇಲಿರಲಿ. ಕಷ್ಟದಲ್ಲಿ ನಮ್ಮನ್ನು ಕೈಬಿಡಬೇಡ.

ಮುಖ್ಯಪ್ರಾಣನ ಸ್ತುತಿ :

श्रीमद्रामाभिरामामितमहिमपदप्रौढपाथोरुहालिः
कृष्णानिष्टामितक्ष्मापरिवृढपटलीपाटनैकप्रवीणः ।
वेदव्यासोपदेशाधिकसमधिगतानन्तवेदान्तभावो
भूयात्कीशावनीशव्रतितनुरनिलः श्रेयसे भूयसे नः ॥ ३ ॥

**ಶ್ರೀಮದ್ರಾಮಾಭಿರಾಮಾಮಿತಮಹಿಮಪದಪ್ರೌಢಪಾಥೋರುಹಾಲಿಃ**
**ಕೃಷ್ಣಾನಿಷ್ಟಾಮಿತಕ್ಷ್ಮಾಪರಿವೃಢಪಟಲೀಪಾಟನೈಕಪ್ರವೀಣಃ**
**ವೇದವ್ಯಾಸೋಪದೇಶಾಧಿಕಸಮಧಿಗತಾನಂತವೇದಾಂತಭಾವೋ**
**ಭೂಯಾತ್ ಕೀಶಾವನೀಶವ್ರತಿತನುರನಿಲಃ ಶ್ರೇಯಸೇ ಭೂಯಸೇ ನಃ ॥3॥**

*ಅನ್ವಯಾರ್ಥ :*

ಶ್ರೀಮದ್ರಾಮಾಭಿರಾಮಾಮಿತಮಹಿಮಪದಪ್ರೌಢಪಾಥೋರುಹಾಲಿಃ - ಶ್ರೀಮತ್= ಕಾಂತಿಯುಕ್ತರಾದ, ರಾಮ= ಶ್ರೀರಾಮಚಂದ್ರದೇವರ, ಅಭಿರಾಮ= ಮನೋಹರವಾದ, ಅಮಿತಮಹಿಮ= ಅಪಾರ ಮಹಿಮಾ ಶಾಲಿಗಳಾದ, ಪದ= ಕಾಲುಗಳೆಂಬ, ಪ್ರೌಢ= ಚೆನ್ನಾಗಿ ಬೆಳೆದ, ಪಾಥೋರುಹ= ಕಮಲಗಳಲ್ಲಿ, ಅಲಿಃ= ದುಂಬಿಯಂತೆ( ಆಸಕ್ತರಾಗಿ)ಇರುವ, ಕೃಷ್ಣಾನಿಷ್ಟಾಮಿತಕ್ಷ್ಮಾಪರಿವೃಢಪಟಲೀ-ಪಾಟನೈಕಪ್ರವೀಣಃ - ಕೃಷ್ಣ= ಯಾದವಕೃಷ್ಣನಿಗೆ (ಕೃಷ್ಣಾ= ದ್ರೌಪದೀದೇವಿಯರಿಗೆ), ಅನಿಷ್ಟ= ಶತ್ರುಗಳಾದ, ಅಮಿತ= ಅಸಂಖ್ಯಾತರಾದ, ಕ್ಷ್ಮಾಪರಿವೃಢ= ರಾಜರಾದ ಜರಾಸಂಧಾದಿಗಳ, ಪಟಲೀ= ಸಮೂಹದ, ಪಾಟನ= ನಾಶ ಮಾಡು-ವುದರಲ್ಲಿ, ಏಕಪ್ರವೀಣಃ= ಮುಖ್ಯವಾಗಿ ನಿಪುಣರಾದ, ವೇದವ್ಯಾಸೋಪದೇ-ಶಾಧಿಕಸಮಧಿಗತಾನಂತವೇದಾಂತಭಾವಃ- ವೇದವ್ಯಾಸ= ಶ್ರೀಬಾದರಾಯಣರ, ಉಪದೇಶ= ಉಪದೇಶದಿಂದ, ಅಧಿಕ= ಹೆಚ್ಚಾಗಿ, ಸಮಧಿಗತ= ತಿಳಿಯಲ್ಪಟ್ಟ,

ಅನಂತ= ನಾಶರಹಿತವಾದ (ಅಪೌರುಷೇಯ ವಾದ), ವೇದಾಂತ= ಉಪನಿಷತ್ತುಗಳ, ಭಾವ:= ಅಭಿಪ್ರಾಯವುಳ್ಳ, ಕೀಶಾವನೀಶವ್ರತಿತನು: – ಕೀಶ= ಕಪಿಸ್ವರೂಪನಾದ ಹನುಮಂತನು, ಅವನೀಶ= ಕ್ಷತ್ರಿಯಸ್ವರೂಪನಾದ ಭೀಮಸೇನನು, ವ್ರತಿತನು:= ಯತಿರೂಪಿಯಾದ ಶ್ರೀಮಧ್ವರು ಇವರ ಸ್ವರೂಪದಿಂದ ಅವತರಿಸಿದ, ಅನಿಲ:= ಮುಖ್ಯಪ್ರಾಣದೇವರು, ನ:= ನಮ್ಮ, ಭೂಯಸೇ= ಅಧಿಕವಾದ, ಶ್ರೇಯಸೇ= ಮೋಕ್ಷಾದಿಪುರುಷಾರ್ಥಗಳಿಗಾಗಿ, ಭೂಯಾತ್= ಅನುಗ್ರಹೋನ್ಮುಖರಾಗಲಿ.

ಭಾವಾರ್ಥ :

ಶ್ರೀರಾಮಚಂದ್ರದೇವರ ಮನೋಹರವಾದ ಮಹಿಮಾಶಾಲಿಗಳಾದ ಪಾದಾರವಿಂದಗಳಲ್ಲಿ ದುಂಬಿಯಂತೆ ಆಸಕ್ತನಾದ ಹನುಮಂತನಾಗಿ ಅವತರಿಸಿದ, ಶ್ರೀಕೃಷ್ಣ ಹಾಗೂ ದ್ರೌಪದಿಯರ ಶತ್ರುಗಳಾದ ದುಷ್ಟರಾಜರನ್ನು ಸದೆ ಬಡಿಯಲು ಭೀಮನಾಗಿ ಅವತರಿಸಿದ, ಶ್ರೀಬಾದರಾಯಣರ ಉಪದೇಶದಿಂದ ಉಪನಿಷತ್ತುಗಳ ಭಾವವನ್ನು ಚೆನ್ನಾಗಿ ಅರಿತ ಮಧ್ವರಾಗಿ ಅವತರಿಸಿದ ಶ್ರೀಮುಖ್ಯಪ್ರಾಣದೇವರು ನಮ್ಮನ್ನು ಅನುಗ್ರಹಿಸಲಿ.

### ಶ್ರೀಮಧ್ವರ ಸ್ತೋತ್ರ

उद्वेलव्यासतन्त्रव्यवसितनिखिलाभिज्ञहृद्यानवद्या-
नन्तत्रय्यन्तभावप्रकटनघटनासर्वतन्त्रस्वतन्त्रे ।
संवर्ण्ये मन्त्रवर्णैरनितरविषयस्पर्शिभिः पावमाने
रूपे लोकैकदीपे प्रसरतु हृदयं मामकं मध्वनाम्नि ॥ ४ ॥

ಉದ್ವೇಲವ್ಯಾಸತಂತ್ರವ್ಯವಸಿತ ನಿಖಿಲಾಭಿಜ್ಞಹೃದ್ಯಾನವದ್ಯಾ-
ನಂತತ್ರಯ್ಯಂತಭಾವಪ್ರಕಟನಘಟನಾಸರ್ವತಂತ್ರಸ್ವತಂತ್ರೇ ।

**ಸಂವರ್ಣ್ಯೇ ಮಂತ್ರವರ್ಣೈರನಿತರವಿಷಯಸ್ಪರ್ಶಿಭಿಃ ಪಾವಮಾನೇ**
**ರೂಪೇ ಲೋಕೈಕದೀಪೇ ಪ್ರಸರತು ಹೃದಯಂ ಮಾಮಕಂ ಮಧ್ವನಾಮ್ನಿ ॥4॥**

*ಅನ್ವಯಾರ್ಥ:*

**ಉದ್ವೇಲವ್ಯಾಸತಂತ್ರವ್ಯವಸಿತನಿಖಿಲಾಭಿಜ್ಞಹೃದ್ಯಾನವದ್ಯಾನಂತತ್ರಯ್ಯಂತ ಭಾವಪ್ರಕಟನಘಟನಾಸರ್ವತಂತ್ರಸ್ವತಂತ್ರೇ - ಉದ್ವೇಲ= ಅಪರಿಮಿತವಾದ, ವ್ಯಾಸತಂತ್ರ= ಶ್ರೀಬಾದರಾಯಣ ಪ್ರಣೀತವಾದ ಶಾಸ್ತ್ರಗಳಿಂದ, ವ್ಯವಸಿತ= ವಿಶೇಷವಾಗಿ ನಿರ್ಣಯಿಸಲ್ಪಟ್ಟ, ನಿಖಿಲಾಭಿಜ್ಞಹೃದ್ಯ= ಸಮಸ್ತ ಜ್ಞಾನಿಗಳಿಗೂ ಮನ ಒಪ್ಪುವ, ಅನವದ್ಯ= ನಿರ್ದುಷ್ಟವಾದ, ಅನಂತ= ಅಪರಿಮಿತವಾದ, ತ್ರಯ್ಯಂತಭಾವ= ವೇದೋಪನಿಷತ್ತುಗಳ ಅಭಿಪ್ರಾಯದ, ಪ್ರಕಟನ= ಪ್ರಕಾಶನದಲ್ಲಿ, ಘಟನಾ= ಸಮರ್ಥನೆಯಲ್ಲಿ, ಸರ್ವತಂತ್ರ= ಎಲ್ಲ ದರ್ಶನ ಗಳಲ್ಲಿಯೂ, ಸ್ವತಂತ್ರೇ= ಸ್ವತಂತ್ರರಾದ, ಅನಿತರವಿಷಯಸ್ಪರ್ಶಿಭಿಃ= ಇತರ ವಿಷಯ ಗಳಿಗೆ ಸಂಬಂಧಿಸದ (ಕೇವಲ ಮಧ್ವರನ್ನು ಮಾತ್ರ ಪ್ರತಿಪಾದಿಸುವ) ಮಂತ್ರವರ್ಣೈಃ= ವೇದಮಂತ್ರಗಳಲ್ಲಿರುವ ಸ್ತೋತ್ರಗಳಿಂದ, ಸಂವರ್ಣ್ಯೇ= ಮುಖ್ಯಪ್ರತಿಪಾದ್ಯವಾದ, ಲೋಕೈಕದೀಪೇ - ಲೋಕ= ಸಜ್ಜನರಿಗೆ, ಏಕ= ಮುಖ್ಯವಾದ, ದೀಪೇ= ಬೆಳಕನ್ನು ಬೀರುವ, ಮಧ್ವನಾಮ್ನಿ= ಮಧ್ವ ಎಂಬ ಹೆಸರುಳ್ಳ, ಪಾವಮಾನೇ= ಮುಖ್ಯಪ್ರಾಣ ಸಂಬಂಧಿಯಾದ, ರೂಪೇ= ಅವತಾರರೂಪದಲ್ಲಿ, ಮಾಮಕಂ= ನನ್ನ ಸಂಬಂಧಿಯಾದ, ಹೃದಯಂ= ಮನಸ್ಸು, ಪ್ರಸರತು= ವಿಶೇಷವಾಗಿ ಸಾಗಲಿ.**

ಭಾವಾರ್ಥ:

ಶ್ರೀಮುಖ್ಯಪ್ರಾಣದೇವರ ಮೂರನೇ ಅವತಾರಭೂತರಾದ ಶ್ರೀಮನ್ಮಧ್ವಾಚಾರ್ಯರು ಶ್ರೀಬಾದರಾಯಣರಿಂದ ಪ್ರಣೀತವಾದ ಬ್ರಹ್ಮಮೀಮಾಂಸಾಶಾಸ್ತ್ರಗಳಿಂದ ವೇದೋಪನಿಷತ್ತುಗಳ ಭಾವವನ್ನು ಚೆನ್ನಾಗಿ

ನಿರ್ಣಯಿಸಿಕೊಂಡಿದ್ದಾರೆ. ನಿರ್ದುಷ್ಟವಾದ. ಜ್ಞಾನಿಜನರಿಗೆ ಮನೋಹರವಾದ ಆ ನಿರ್ಣಯವನ್ನು ಪ್ರಕಟಗೊಳಿಸಿದ್ದಾರೆ. ಹಾಗೂ ಚೆನ್ನಾಗಿ ಸಮರ್ಥಿಸಿದ್ದಾರೆ. ಸಮಸ್ತ ದರ್ಶನಗಳನ್ನು ಯಾರ ಸಹಾಯವೂ ಇಲ್ಲದೇ ತಿಳಿಯುವುದರಲ್ಲಿ ಮತ್ತು ವಿಮರ್ಶಿಸುವುದರಲ್ಲಿಯೂ ಸಮರ್ಥರು. ವೇದಗಳಲ್ಲಿರುವ ಬಳಿತ್ಥಾ-ಸೂಕ್ತವೇ ಮೊದಲಾದ ಅನೇಕ ಸೂಕ್ತಗಳು ನಿರವಕಾಶವಾಗಿ ಇವರನ್ನೇ ಪ್ರತಿಪಾದಿಸುತ್ತಲಿವೆ. ಅಜ್ಞಾನಾಂಧಕಾರದಲ್ಲಿ ಮುಳುಗಿದ್ದ ಸಜ್ಜನರಿಗೆ ಜ್ಞಾನದ ಬೆಳಕನ್ನು ನೀಡಿದ ಶ್ರೀಮಧ್ವಾಚಾರ್ಯರತ್ತ ನನ್ನ ಮನಸ್ಸು ವಿಶೇಷವಾಗಿ ಸಾಗಲಿ.

### ಶ್ರೀಜಯತೀರ್ಥರ ಸ್ತುತಿ

**त्रिज्ञानोदर्कतर्कप्रतिपदमधुरोदारसन्दर्भगर्भ-**
**प्रौढानेकप्रबन्धप्रकटितभगवत्पादभाष्यादिभावः ।**
**मिथ्यावादापवादप्रकुपितविमतध्वान्तसन्तानभानु-**
**र्जीयादन्यैरजय्यस्त्रिभुवनविदिताश्चर्यचर्यो जयार्यः ॥ ५ ॥**

**ವಿಜ್ಞಾನೋದರ್ಕತರ್ಕಪ್ರತಿಪದಮಧುರೋದಾರಸಂದರ್ಭಗರ್ಭ**
**ಪ್ರೌಢಾನೇಕಪ್ರಬಂಧಪ್ರಕಟಿತಭಗವತ್ಪಾದಭಾಷ್ಯಾದಿಭಾವಃ ।**
**ಮಿಥ್ಯಾವಾದಾಪವಾದಪ್ರಕುಪಿತವಿಮತಧ್ವಾಂತಸಂತಾನಭಾನು-**
**ರ್ಜೀಯಾದನ್ಯೈರಜಯ್ಯಸ್ತ್ರಿಭುವನವಿದಿತಾಶ್ಚರ್ಯಚರ್ಯೋ ಜಯಾರ್ಯಃ**
**॥ 5 ॥**

*ಅನ್ವಯಾರ್ಥ :*

ವಿಜ್ಞಾನೋದರ್ಕತರ್ಕಪ್ರತಿಪದಮಧುರೋದಾರಸಂದರ್ಭಗರ್ಭಪ್ರೌಢಾನೇಕ-

ಪ್ರಬಂಧಪ್ರಕಟಿತಭಗವತ್ಪಾದಭಾಷ್ಯಾದಿಭಾವಃ - ವಿಜ್ಞಾನ= ವಿಶೇಷ ಜ್ಞಾನವೆಂಬ, ಉದರ್ಕ= ಭಾವಿಫಲವುಳ್ಳ, ತರ್ಕ= ಯುಕ್ತಿಗಳುಳ್ಳ ವಾಗೂ, ಪ್ರತಿಪದ= ಪ್ರತಿಯೊಂದು ಪದದಿಂದಲೂ, ಮಧುರ= ಮನೋಹರವಾದ, ಉದಾರ= ಉತ್ಕೃಷ್ಟವಾದ, ಸಂದರ್ಭ= ವಾಕ್ಯರಚನಾವಿಶೇಷಗಳನ್ನು, ಗರ್ಭ= ಒಳಗೊಂಡಿರುವ, ಪ್ರೌಢ= ಶಬ್ದ ಮತ್ತು ಅರ್ಥಗಳಿಂದ ಮಹತ್ತರವಾದ, ಅನೇಕಪ್ರಬಂಧ= ಬಹುಪ್ರಬಂಧಗಳಿಂದ, ಪ್ರಕಟಿತ= ಪ್ರಕಟಗೊಳಿಸಲ್ಪಟ್ಟ, ಭಗವತ್ಪಾದ= ಪೂಜ್ಯರಾದ ಶ್ರೀಮದಾಚಾರ್ಯರ, ಭಾಷ್ಯಾದಿ= ಭಾಷ್ಯವೇ ಮೊದಲಾದ ಗ್ರಂಥಗಳ, ಭಾವಃ= ಅಭಿಪ್ರಾಯವುಳ್ಳ, ಮಿಥ್ಯಾವಾದಾಪವಾದಪ್ರಕುಪಿತವಿಮತಧ್ವಾಂತಸಂತಾನಭಾನುಃ-ಮಿಥ್ಯಾವಾದ=ಪ್ರಪಂಚಮಿಥ್ಯಾತ್ವವಾದವೆಂಬ, ಅಪವಾದ= ಅಸಮೀಚೀನ ಭಾಷಣದಿಂದ, ಪ್ರಕುಪಿತ= ಅತಿಯಾಗಿ ಹರಡಿದ, ವಿಮತ= ವಿರುದ್ಧಮತವೆಂಬ, ಧ್ವಾಂತ= ಕತ್ತಲೆಯ, ಸಂತಾನ= ಪರಂಪರೆಗೆ, ಭಾನುಃ= ಸೂರ್ಯನಂತಿರುವ, ಅನ್ಯೈಃ= ಪರವಾದಿಗಳಿಂದ, ಅಜಯ್ಯಃ= ಜಯಿಸಲು ಅಶಕ್ಯರಾದ, ತ್ರಿಭುವನವಿದಿತಾಶ್ಚರ್ಯಚರ್ಯಃ - ತ್ರಿಭುವನ= ಮೂರುಲೋಕ ಗಳಲ್ಲಿ, ವಿದಿತ= ಪ್ರಸಿದ್ಧವಾದ, ಆಶ್ಚರ್ಯ= ಆಶ್ಚರ್ಯಜನಕವಾದ, ಚರ್ಯಃ= ಚರಿತ್ರೆಯುಳ್ಳ, ಜಯಾರ್ಯಃ= ಪೂಜ್ಯರಾದ ಶ್ರೀಜಯತೀರ್ಥರು, ಜೀಯಾತ್= ಉತ್ಕೃಷ್ಟರೆಂದು ತಿಳಿಯಲ್ಪಡಲಿ.

ಭಾವಾರ್ಥ :

ಶ್ರೀಮಜ್ಜಯತೀರ್ಥರು ಮುಂಬರಲಿರುವ ಸಜ್ಜನರಿಗೆಲ್ಲ ವಿಶೇಷವಾದ ಜ್ಞಾನ ಉಂಟಾಗಲೆಂದು ನಾನಾಯುಕ್ತಿಗಳಿಂದ ಕೂಡಿದ, ಪ್ರತಿಪದ ದಲ್ಲಿಯೂ ಮನೋಹರವಾದ ವಾಕ್ಯರಚನೆಗಳಿಂದ ತುಂಬಿದ ಶ್ರೀಮನ್ನ್ಯಾಯಸುಧಾ ತತ್ತ್ವಪ್ರಕಾಶಿಕಾ ಮೊದಲಾದ ಉದ್ಗ್ರಂಥಗಳನ್ನು ರಚಿಸಿದ್ದಾರೆ. ಅವುಗಳ ಮೂಲಕ ಶ್ರೀಮದಾಚಾರ್ಯರ ಅನುವ್ಯಾಖ್ಯಾನಭಾಷ್ಯ ಮೊದಲಾದ

ಗ್ರಂಥಗಳ ಭಾವವನ್ನು ಪ್ರಕಟಪಡಿಸಿದ್ದಾರೆ. ಸೂರ್ಯನು ಕತ್ತಲೆಯನ್ನು ಪರಿಹರಿಸುವಂತೆ ಪ್ರಪಂಚಮಿಥ್ಯಾತ್ವವಾದವೇ ಮೊದಲಾದ ದುರ್ವಾದಗಳನ್ನು ಖಂಡಿಸಿದ್ದಾರೆ. ಸಾಂಸಾರಿಕ ಭೋಗದಲ್ಲಿ ವೈರಾಗ್ಯ, ಪರವಾದಿಜಯ, ಮೊದಲಾದ ಆಶ್ಚರ್ಯಜನಕ ಸಂಗತಿಗಳಿಂದ ತ್ರೈಲೋಕ್ಯವಿಖ್ಯಾತರಾಗಿದ್ದಾರೆ. ಅಂತಹ ಶ್ರೀ ಜಯತೀರ್ಥರ ಉತ್ಕೃಷ್ಟತ್ವ ಜ್ಞಾನ ನಮಗಾಗಲಿ.

ಶ್ರೀವಿಬುಧೇಂದ್ರರ ಸ್ತುತಿ.

**श्रीमत्पूर्णप्रवोधप्रकटितपदवीधाविमेधाविधीमत्-**
**सेनानासीरसीमासमुदितविदिताबाधयोधाधिनेता ।**
**मायासिद्धान्तदीक्षाविघटनघटनासर्वतन्त्रस्वतन्त्रः**
**श्रीरामव्यासदासो विलसति विबुधेन्द्राभिधः संयमीन्द्रः ॥ ६ ॥**

**ಶ್ರೀಮತ್ ಪೂರ್ಣಪ್ರಬೋಧಪ್ರಕಟಿತಪದವೀ ಧಾವಿ ಮೇಧಾವಿಧೀಮತ್**
**ಸೇನಾನಾಸೀರಸೀಮಾಸಮುದಿತ ವಿದಿತಾಬಾಧಯೋಧಾಧಿನೇತಾ ।**
**ಮಾಯಾಸಿದ್ಧಾಂತದೀಕ್ಷಾವಿಘಟನಘಟನಾಸರ್ವತಂತ್ರಸ್ವತಂತ್ರಃ**
**ಶ್ರೀರಾಮವ್ಯಾಸದಾಸೋ ವಿಲಸತಿ ವಿಬುಧೇಂದ್ರಾಭಿಧಃ ಸಂಯಮೀಂದ್ರಃ ॥**

ಅನ್ವಯಾರ್ಥ :

ಶ್ರೀಮತ್ಪೂರ್ಣಪ್ರಬೋಧಪ್ರಕಟಿತಪದವೀಧಾವಿಮೇಧಾವಿಧೀಮತ್ಸೇನಾನಾಸೀರ-ಸೀಮಾಸಮುದಿತವಿದಿತಾಬಾಧಯೋಧಾಧಿನೇತಾ - ಶ್ರೀಮತ್= ಕಾಂತಿಯುಕ್ತರಾದ, ಪೂರ್ಣಪ್ರಬೋಧ= ಮಧ್ವಾಚಾರ್ಯರಿಂದ, ಪ್ರಕಟಿತ= ಪ್ರಕಾಶಿಸಲ್ಪಟ್ಟ, ಪದವೀ= ಸತ್ಸಿದ್ಧಾಂತದ ಪಥದಲ್ಲಿ, ಧಾವಿ= ಚಲಿಸುವ, ಮೇಧಾವಿ= ಮೇಧಾ-ಶಕ್ತಿಸಂಪನ್ನರಾದ, ಧೀಮತ್= ಜ್ಞಾನಿಗಳೆಂಬ, ಸೇನಾ= ಸೈನ್ಯದ, ನಾಸೀರಸೀಮಾ= ಅಗ್ರಪ್ರದೇಶದಲ್ಲಿ (ಮುಂಭಾಗದಲ್ಲಿ), ಸಮುದಿತ= ಸೇರಿದ, ವಿದಿತ=

ಪ್ರಖ್ಯಾತರಾದ, ಅಬಾಧ= ಸೋಲಿಲ್ಲದ, ಯೋಧ= ಯೋಧರಿಗೆ, ಅಧಿನೇತಾ= ನಾಯಕರಾದ, ಮಾಯಾಸಿದ್ಧಾಂತದೀಕ್ಷಾವಿಘಟನಘಟನಾಸರ್ವತಂತ್ರಸ್ವತಂತ್ರಃ - ಮಾಯಾ= ಮಾಯಾವಾದವು, ಸಿದ್ಧಾಂತ= ತತ್ತ್ವವಾದ ಇವುಗಳ ದೀಕ್ಷಾ= ದೀಕ್ಷೆಗಳ, ವಿಘಟನಘಟನಾ= ಕ್ರಮವಾಗಿ ಖಂಡನ ಹಾಗೂ ಮಂಡನಗಳಲ್ಲಿ, ಸರ್ವತಂತ್ರ= ಸಮಸ್ತದರ್ಶನಗಳಲ್ಲಿ, ಸ್ವತಂತ್ರಃ= ಸ್ವತಂತ್ರರಾದ, ಶ್ರೀರಾಮವ್ಯಾಸದಾಸಃ= ಶ್ರೀರಾಮಚಂದ್ರ ಹಾಗೂ ವೇದವ್ಯಾಸರ ಭೃತ್ಯರಾದ, ವಿಬುಧೇಂದ್ರಾಭಿಧಃ= ಶ್ರೀವಿಬುಧೇಂದ್ರರೆಂಬ ಹೆಸರುಳ್ಳ, ಸಂಯಮೀಂದ್ರಃ= ಯತಿ ಶ್ರೇಷ್ಠರು, ವಿಲಸತಿ= ಪ್ರಕಾಶಿಸುತ್ತಾರೆ.

ಭಾವಾರ್ಥ :

ದುರ್ವಾದಿಗಳನ್ನು ಜಯಿಸಲು ಶ್ರೀಮನ್ಮಧ್ವಾಚಾರ್ಯರು ತೋರಿಸಿ ಕೊಟ್ಟ ದ್ವೈತಮಾರ್ಗದಲ್ಲಿ ಶ್ರೀಪದ್ಮನಾಭತೀರ್ಥರೇ ಮೊದಲಾದವರ ಸೈನ್ಯಪಡೆಯು ಮುನ್ನಡೆದು ಜಯವನ್ನು ಸಾಧಿಸಿತು. ಬಳಿಕ ಆ ಪಥದಲ್ಲಿ ಸಂಚಲನ ಪ್ರಾರಂಭಿಸಿದ ಮೇಧಾವಿ ಧೀಮಂತ ಸೈನ್ಯಪಡೆಯ ಮುಂಚೂಣಿಯಲ್ಲಿದ್ದ ಯೋಧವರ್ಗದ ಅಧಿನಾಯಕರಾಗಿದ್ದವರು ಶ್ರೀವಿಬುಧೇಂದ್ರತೀರ್ಥರು. ಅವರು ಮಾಯಾವಾದದ ನಿರಾಕರಣೆಯಲ್ಲಿಯೂ ತತ್ತ್ವವಾದದ ಸ್ಥಾಪನೆಯಲ್ಲಿಯೂ ಸರ್ವದರ್ಶನಗಳಲ್ಲಿಯೂ ಸ್ವತಂತ್ರರಾಗಿದ್ದವರು. ಅಂತಹ ಶ್ರೀರಾಮ ಹಾಗೂ ವೇದವ್ಯಾಸರ ಆರಾಧಕರಾದ ಶ್ರೀವಿಬುಧೇಂದ್ರತೀರ್ಥರು ಪ್ರಕಾಶಿಸುತ್ತಾರೆ.

### ಶ್ರೀವ್ಯಾಸರಾಜಸ್ತುತಿ

मायातन्त्रामरारिस्मयमपनयतोमध्वसिद्धान्तनाम्नो
नेत्राणीव त्रयोऽपि त्रिजगति नृहरेरिन्धते यत्प्रबन्धाः ।

यद्वागद्वैतविद्याचलकुलकुलिशप्रौढिमाढौकते सः
श्रेयो भूयो विदध्यात्सुमहितमहिमा सम्प्रति व्यासराजः ॥ ७ ॥

**ಮಾಯಾತಂತ್ರಾಮರಾರಿಸ್ಮಯಮಪನಯತೋ ಮಧ್ವಸಿದ್ಧಾಂತನಾಮ್ನೋ**
**ನೇತ್ರಾಣೀವ ತ್ರಯೋಽಪಿ ತ್ರಿಜಗತಿ ನೃಹರೇರಿಂಧತೇ ಯತ್ಪ್ರಬಂಧಾಃ ।**
**ಯದ್ವಾಗದ್ವೈತವಿದ್ಯಾಚಲಕುಲಕುಲಿಶಪ್ರೌಢಿಮಾಢೌಕತೇ ಸಃ**
**ಶ್ರೇಯೋ ಭೂಯೋ ವಿದಧ್ಯಾತ್ ಸುಮಹಿತಮಹಿಮಾ ಸಂಪ್ರತಿ ವ್ಯಾಸರಾಜಃ॥**

ಅನ್ವಯಾರ್ಥ :

ಯತ್ಪ್ರಬಂಧಾಃ= ಯಾವ ವ್ಯಾಸರಾಜರ ಪ್ರಬಂಧಗಳು, ತ್ರಯೋಽಪಿ= ಮೂರೂ ಕೂಡ, ತ್ರಿಜಗತಿ= ಮೂರು ಲೋಕಗಳಲ್ಲಿ, ಮಾಯಾತಂತ್ರಾಮರಾರಿಸ್ಮಯಂ- ಮಾಯಾತಂತ್ರ= ಮಾಯಾವಾದವೆಂಬ, ಅಮರಾರಿ= ದೇವತೆಗಳ ಶತ್ರುವಾದ ಹಿರಣ್ಯಕಶಿಪುವಿನ, ಸ್ಮಯಂ= ಗರ್ವವನ್ನು, ಅಪನಯತಃ= ನಿರಾಕರಿಸುವ, ಮಧ್ವಸಿದ್ಧಾಂತನಾಮ್ನಃ= ಮಧ್ವಸಿದ್ಧಾಂತವೆಂಬ, ನೃಹರೇಃ= ನರಸಿಂಹದೇವರ, ನೇತ್ರಾಣೀವ= ಮೂರು ಕಣ್ಣುಗಳಂತೆ, ಇಂಧತೇ= ಪ್ರಕಾಶಿಸುತ್ತವೆಯೋ, ಯದ್ವಾಕ್= ಯಾವ ವ್ಯಾಸರಾಜರ ವಾಣಿಯು, ಅದ್ವೈತವಿದ್ಯಾಚಲಕುಲಕುಲಿಶ- ಪ್ರೌಢಿಂ-ಅದ್ವೈತವಿದ್ಯಾ=ಅದ್ವೈತಶಾಸ್ತ್ರವೆಂಬ, ಅಚಲಕುಲ= ಪರ್ವತಸಮೂಹದ ವಿಷಯದಲ್ಲಿ ಕುಲಿಶಪ್ರೌಢಿಂ= ವಜ್ರಾಯುಧದ ಸಾಮರ್ಥ್ಯವನ್ನು, ಆಢೌಕತೇ= ಹೊಂದುತ್ತದೆಯೋ, ಸಃ= ಅಂತಹ, ಸುಮಹಿತಮಹಿಮಾ= ಪ್ರಖ್ಯಾತಮಹಿಮಾ- ಶಾಲಿಗಳಾದ, ವ್ಯಾಸರಾಜಃ= ಶ್ರೀವ್ಯಾಸರಾಜರು, ಸಂಪ್ರತಿ= ಈಗ, ಭೂಯಃ= ಬಹಳವಾದ, ಶ್ರೇಯಃ= ಶ್ರೇಯಸ್ಸನ್ನು ವಿದಧ್ಯಾತ್= ಉಂಟು ಮಾಡಲಿ.

ಭಾವಾರ್ಥ :

ಹಿರಣ್ಯಕಶಿಪು ಎಲ್ಲೆಡೆ ತನ್ನ ಗರ್ವವನ್ನು ತೋರಿಸಿದಾಗ ಶ್ರೀನರಸಿಂಹ

ದೇವರ ಮೂರು ಕಣ್ಣುಗಳು ಉಜ್ವಲವಾದ ತೇಜಸ್ಸಿನಿಂದ ಅವನ ಗರ್ವವನ್ನಡಗಿಸಿದವು. ಅದರಂತೆ ಮಾಯಾವಾದವೂ ಗರ್ವದಿಂದ ಬೀಗಿದಾಗ ಮಧ್ವಸಿದ್ಧಾಂತದ ಮೂರು ಕಣ್ಣುಗಳಂತಿರುವ ನ್ಯಾಯಾಮೃತ ತರ್ಕತಾಂಡವ ತಾತ್ಪರ್ಯಚಂದ್ರಿಕಾ ಎಂಬ ವ್ಯಾಸರಾಜರ ಮೂರು ಪ್ರಬಂಧಗಳು ಮಾಯಾವಾದವನ್ನು ನಿರಾಕರಿಸಿದವು. ಜ್ಞಾನದ ಬೆಳಕನ್ನು ಬೀರಿದವು. ಹಿಂದೆ ದೇವೇಂದ್ರನ ವಜ್ರಾಯುಧವು ಪರ್ವತಶ್ರೇಣಿಯನ್ನೇ ಭೇದಿಸುತ್ತಿತ್ತು. ಅದರಂತೆ ವ್ಯಾಸರಾಜರ ವಾಣಿಯೂ ಅಚಲದಂತಿರುವ ಅದ್ವೈತವಿದ್ಯೆಯನ್ನು ನಿರಾಕರಿಸುತ್ತದೆ. ಅಂತಹ ವಿಖ್ಯಾತಮಹಿಮಾಶಾಲಿಗಳಾದ ಶ್ರೀವ್ಯಾಸರಾಜರು ನಮಗೆ ಪುನಃ ಪುನಃ ಶ್ರೇಯಸ್ಸನ್ನು ಕರುಣಿಸಲಿ.

### ಶ್ರೀವಿಜಯೀಂದ್ರರ ಸ್ತುತಿ

चातुर्यैकाकृतिर्यश्चतुरधिकशतग्रन्थरत्नप्रणेता
धूतारातिप्रबन्धः स्फुटविदितचतुःषष्टिविद्याविशेषः ।
सोऽयं नः श्रीसुरेन्द्रव्रतिवरतनयोऽद्वैतशैवासहिष्णुः
पुष्णातु श्रीजयीन्द्रस्त्रिभुवनविदितः सर्वतन्त्रस्वतन्त्रः ॥ ८ ॥

**ಚಾತುರ್ಯೈಕಾಕೃತಿರ್ಯಶ್ಚತುರಧಿಕಶತಗ್ರಂಥರತ್ನಪ್ರಣೇತಾ**
**ಧೂತಾರಾತಿಪ್ರಬಂಧಃ ಸ್ಫುಟವಿದಿತಚತುಃಷಷ್ಟಿವಿದ್ಯಾವಿಶೇಷಃ ।**
**ಸೋಽಯಂ ನಃ ಶ್ರೀಸುರೇಂದ್ರವ್ರತಿವರತನಯೋಽದ್ವೈತಶೈವಾಸಹಿಷ್ಣುಃ**
**ಪುಷ್ಣಾತು ಶ್ರೀಜಯೀಂದ್ರಸ್ತ್ರಿಭುವನವಿದಿತಃ ಸರ್ವತಂತ್ರಸ್ವತಂತ್ರಃ ॥ 8 ॥**

ಅನ್ವಯಾರ್ಥ :

ಚಾತುರ್ಯೈಕಾಕೃತಿಃ - ಚಾತುರ್ಯ= ಚಮತ್ಕಾರವೇ, ಏಕ= ಮುಖ್ಯವಾದ, ಆಕೃತಿಃ= ಸ್ವರೂಪವಾಗಿ ಉಳ್ಳ, ಯಃ= ಯಾವ ಶ್ರೀವಿಜಯೀಂದ್ರತೀರ್ಥರು, ಚತುರಧಿಕಶತ-

ಗ್ರಂಥರತ್ನಪ್ರಣೇತಾ - ಚತುರಧಿಕಶತ= ನೂರಾನಾಲ್ಕು, ಗ್ರಂಥರತ್ನ= ಶ್ರೇಷ್ಠ-ಗ್ರಂಥಗಳನ್ನು, ಪ್ರಣೇತಾ= ರಚಿಸಿದವರೋ, ಧೂತಾರಾತಿಪ್ರಬಂಧಃ - ಧೂತ= ನಿರಾಕರಿಸಲ್ಪಟ್ಟ, ಅರಾತಿ= ಶತ್ರುಗಳಾದ ದುರ್ವಾದಿಗಳ, ಪ್ರಬಂಧಃ= ಗ್ರಂಥ-ಗಳುಳ್ಳವರೋ, ಸ್ಫುಟವಿದಿತಚತುಷ್ಷಷ್ಟಿವಿದ್ಯಾವಿಶೇಷಃ - ಸ್ಫುಟ= ಚೆನ್ನಾಗಿ, ವಿದಿತ= ತಿಳಿಯಲ್ಪಟ್ಟ, ಚತುಷ್ಷಷ್ಟಿ= ಅರವತ್ನಾಲ್ಕು, ವಿದ್ಯಾವಿಶೇಷಃ= ಕಲಾಪ್ರಭೇದ-ಗಳುಳ್ಳವರೋ, ಸಃ= ಅಂತಹ, ಅಯಂ= ಪ್ರಕೃತರಾದ (ಶ್ರೀರಾಘವೇಂದ್ರತೀರ್ಥರ ಪರಮಗುರುಗಳಾದ), ಶ್ರೀಸುರೇಂದ್ರವ್ರತಿವರತನಯಃ- ಶ್ರೀಸುರೇಂದ್ರವ್ರತಿವರ= ಶ್ರೀಸುರೇಂದ್ರತೀರ್ಥರೆಂಬ ಯತಿಶ್ರೇಷ್ಠರ, ತನಯಃ= ಶಿಷ್ಯರಾದ, ಅದ್ವೈತ-ಶೈವಾಸಹಿಷ್ಣುಃ= ಅದ್ವೈತ ಮತ್ತು ಶೈವ ಮತಗಳನ್ನು ಸಹಿಸದಿರುವ, ತ್ರಿಭುವನವಿದಿತಃ= ಮೂರು ಲೋಕಗಳಲ್ಲಿ ಪ್ರಖ್ಯಾತರಾದ, ಸರ್ವತಂತ್ರಸ್ವತಂತ್ರಃ= ಎಲ್ಲ ದರ್ಶನಗಳಲ್ಲಿ ಸ್ವತಂತ್ರರಾದ, ಶ್ರೀಜಯೀಂದ್ರಃ= ಶ್ರೀ ವಿಜಯೀಂದ್ರತೀರ್ಥರು, ನಃ= ನಮ್ಮನ್ನು, ಪುಷ್ಣಾತು= ಪೋಷಿಸಲಿ.

ಭಾವಾರ್ಥ:

ಚತುರತೆಗೆ ಮತ್ತೊಂದು ಹೆಸರು ಶ್ರೀ ವಿಜಯೀಂದ್ರತೀರ್ಥ ಶ್ರೀಪಾದಂಗಳವರೆನ್ನಬಹುದು. ಅವರ ಒಂದೊಂದು ನುಡಿಯೂ ಅಷ್ಟು ಚಾತುರ್ಯಭರಿತವಾಗಿದೆ. ಇವರು ನೂರಾನಾಲ್ಕು ಪ್ರೌಢಗ್ರಂಥಗಳನ್ನು ರಚಿಸಿದ್ದಾರೆ. ದುರ್ವಾದಿಗಳ ಗ್ರಂಥಗಳನ್ನು ಖಂಡಿಸಿದವರು. ಮಹಾತಪಸ್ವಿಗಳೂ ಯತಿಶ್ರೇಷ್ಠರೂ ಆದ ಶ್ರೀಸುರೇಂದ್ರತೀರ್ಥರ ಶಿಷ್ಯರು. ಅದ್ವೈತ ಮತ್ತು ಶೈವ ಮತಗಳನ್ನು ವಿಶೇಷವಾಗಿ ಖಂಡಿಸಿದವರು. ಅರವತ್ನಾಲ್ಕು ಕಲೆಗಳಲ್ಲಿ ನೈಪುಣ್ಯವನ್ನು ಪಡೆದು ತ್ರಿಲೋಕ ವಿಖ್ಯಾತರಾದವರು. ಸರ್ವ ದರ್ಶನಗಳನ್ನು ಯಾರ ಸಹಾಯವೂ ಇಲ್ಲದೇ ಸ್ವಪ್ರತಿಭಾಬಲದಿಂದ ಅರಿತವರು. ಅಂತಹ ಶ್ರೀ ವಿಜಯೀಂದ್ರತೀರ್ಥ ಶ್ರೀಪಾದಂಗಳವರು ನಮ್ಮನ್ನು ಪೋಷಿಸಲಿ.

व्याधूतावद्यहृद्यामितकृतिरचनाचारुचातुर्यहृष्यत्
कर्णाटक्षोणिपालप्रतिपदरचितानेकरत्नाभिषेकः ।
पत्रीशारूढलक्ष्मीपतिपदनलिनोदग्ररोलम्बलीलो
विख्यातः श्रीसुधीन्द्रव्रतिपतिरतुलं भद्रमुन्निद्रयेन्नः ॥ ९ ॥

**ವ್ಯಾಧೂತಾವದ್ಯಹೃದ್ಯಾಮಿತಕೃತಿರಚನಾಚಾರುಚಾತುರ್ಯಹೃಷ್ಯತ್**
**ಕರ್ಣಾಟಕ್ಷೋಣಿಪಾಲಪ್ರತಿಪದರಚಿತಾನೇಕರತ್ನಾಭಿಷೇಕಃ ।**
**ಪತ್ರೀಶಾರೂಢಲಕ್ಷ್ಮೀಪತಿಪದನಲಿನೋದಗ್ರರೋಲಂಬಲೀಲೋ**
**ವಿಖ್ಯಾತಃ ಶ್ರೀಸುಧೀಂದ್ರವ್ರತಿಪತಿರತುಲಂ ಭದ್ರಮುನ್ನಿದ್ರಯೇನ್ನಃ ॥ 9 ॥**

ಅನ್ವಯಾರ್ಥ :

ವ್ಯಾಧೂತಾವದ್ಯಹೃದ್ಯಾಮಿತಕೃತಿರಚನಾಚಾರುಚಾತುರ್ಯಹೃಷ್ಯತ್ಕರ್ಣಾಟಕ್ಷೋಣಿಪಾಲಪ್ರತಿಪದರಚಿತಾನೇಕರತ್ನಾಭಿಷೇಕಃ - ವ್ಯಾಧೂತ= ವಿಶೇಷವಾಗಿ ಪರಿಹರಿಸಲ್ಪಟ್ಟ, ಅವದ್ಯ= ದೋಷವುಳ್ಳ, ಹೃದ್ಯ= ಮನೋಹರವಾದ, ಅಮಿತ= ಲೆಕ್ಕವಿಲ್ಲದಷ್ಟು ಕೃತಿ= ಕೃತಿಗಳ, ರಚನಾ= ರಚನೆಯಲ್ಲಿರುವ, ಚಾರುಚಾತುರ್ಯ= ಮನೋಜ್ಞವಾದ ನೈಪುಣ್ಯದಿಂದ, ಹೃಷ್ಯತ್= ಸಂತೋಷಗೊಂಡ, ಕರ್ಣಾಟಕ್ಷೋಣಿಪಾಲ= ಕರ್ಣಾಟಕದ ರಾಜರಿಂದ, ಪ್ರತಿಪದ= ಅನೇಕಬಾರಿ, ರಚಿತ= ಮಾಡಲ್ಪಟ್ಟ, ಅನೇಕರತ್ನಾಭಿಷೇಕಃ= ನಾನಾವಿಧರತ್ನಗಳ ಅಭಿಷೇಕವುಳ್ಳ, ಪ್ರತೀಶಾರೂಢಲಕ್ಷ್ಮೀಪತಿಪದನಲಿನೋದಗ್ರರೋಲಂಬಲೀಲಃ - ಪತ್ರೀಶ= ಗರುಡನನ್ನು, ಆರೂಢ= ಏರಿದ, ಲಕ್ಷ್ಮೀಪತಿ= ಲಕ್ಷ್ಮೀವಲ್ಲಭನಾದ ನಾರಾಯಣನ, ಪದನಲಿನ= ಪದಕಮಲಗಳಲ್ಲಿ, ಉದಗ್ರ= ಉತ್ಕೃಷ್ಟವಾದ, ರೋಲಂಬಲೀಲಃ= ದುಂಬಿಯ ಚರ್ಯೆಯುಳ್ಳ, ವಿಖ್ಯಾತಃ= ಪ್ರಸಿದ್ಧರಾದ, ಶ್ರೀಸುಧೀಂದ್ರವ್ರತಿಪತಿಃ= ಶ್ರೀ-

**ಸುಧೀಂದ್ರ-ತೀರ್ಥರೆಂಬ ಯತಿವರೇಣ್ಯರು ನಃ= ನಮಗೆ, ಅತುಲಂ= ಅನುಪಮ-ವಾದ, ಭದ್ರಂ= ಮಂಗಲವನ್ನು, ಉನ್ನಿದ್ರಯೇತ್= ಉಂಟುಮಾಡಲಿ.**

**ಭಾವಾರ್ಥ :**

ಶ್ರೀಸುಧೀಂದ್ರತೀರ್ಥರು ರಚಿಸಿದ, ನಿರ್ದುಷ್ಟವೂ ಶಿಷ್ಟಜನ ಮನೋ-ಹರವೂ ಆದ ಅನೇಕ ಕಾವ್ಯನಾಟಕಗಳು ಶಾಸ್ತ್ರಗ್ರಂಥಗಳು ಮೊದಲಾದ ಕೃತಿಗಳನ್ನು ನೋಡಿ ಸಂತಸಗೊಂಡ ಕರ್ಣಾಟಕದ ರಾಜನು ಅನೇಕ ಬಾರಿ ಇವರನ್ನು ರತ್ನಾಭಿಷೇಕದ ಮೂಲಕ ಗೌರವಿಸಿದ್ದನು. ಶ್ರೀರಾಘವೇಂದ್ರ-ಮಠದ ಸಂಸ್ಥಾನದಲ್ಲಿ ಇಂದು ಪೂಜಿಗೊಳ್ಳುತ್ತಲಿರುವ ಶ್ರೀಗರುಡವಾಹನ ಲಕ್ಷ್ಮೀನಾರಾಯಣದೇವರ ಪಾದಪದ್ಮಗಳನ್ನು ವಿಶೇಷವಾಗಿ ಆರಾಧಿಸಿ ಅನುಗ್ರಹಪಾತ್ರರಾಗಿದ್ದ ಶ್ರೀಸುಧೀಂದ್ರತೀರ್ಥರು ನಮಗೆ ಮಂಗಳನ್ನು ಕರುಣಿಸಲಿ.

### *ಶ್ರೀರಾಘವೇಂದ್ರತೀರ್ಥರ ಸ್ತುತಿ*

**धूतावद्यैरविद्याविघटनपटुभिर्विद्वदभ्यर्थनीयै-**
**र्वाचः प्राचां प्रवाचामुपचयमभजन् यत्कृतग्रन्थजालैः ।**
**सङ्ख्यावन्तो यमाहुर्मुहुरखिलकलामूर्तिमुद्वेलकीर्ति-**
**र्धीरश्रीराघवेन्द्रः स दिशतु सततं भव्यमव्याहतं नः ॥ १० ॥**

**ಧೂತಾವದ್ಯೈರವಿದ್ಯಾವಿಘಟನಪಟುರ್ವಿದ್ವದಭ್ಯರ್ಥ-**
**ನೀಯೈರ್ವಾಚಃ ಪ್ರಾಚಾಂ**
**ಪ್ರವಾಚಾಮುಪಚಯಮಭಜನ್ ಯತ್ಕೃತಗ್ರಂಥಜಾಲೈಃ ।**

**ಸಂಖ್ಯಾವಂತೋ ಯಮಾಹುರ್ಮುಹುರಖಿಲಕಲಾ-**
**ಮೂರ್ತಿಮುದ್ವೇಲಕೀರ್ತಿ-**
**ರ್ಧೀರ ಶ್ರೀ ರಾಘವೇಂದ್ರಸ್ಸ ದಿಶತು ಸತತಂ ಭವ್ಯಮವ್ಯಾಹತಂ ನಃ ॥ 10 ॥**

ಅನ್ವಯಾರ್ಥ :

ಧೂತಾವದ್ಯೈಃ - ಧೂತ= ಪರಿಹರಿಸಲ್ಪಟ್ಟ, ಅವದ್ಯೈಃ= ದೋಷಗಳುಳ್ಳ, ಅವಿದ್ಯಾ-ವಿಘಟನಪಟುಭಿಃ - ಅವಿದ್ಯಾ= ಅಜ್ಞಾನದ, ವಿಘಟನ= ನಾಶದಲ್ಲಿ, ಪಟುಭಿಃ= ಸಮರ್ಥವಾದ, ವಿದ್ವದಭ್ಯರ್ಥನೀಯೈಃ= ವಿದ್ವಾಂಸರಿಂದ ಯಾಚಿಸಲ್ಪಡುವ, ಯತ್ಕೃತಗ್ರಂಥಜಾಲೈಃ - ಯತ್= ಯಾವ ಶ್ರೀರಾಘವೇಂದ್ರತೀರ್ಥರಿಂದ, ಕೃತ= ಮಾಡಲ್ಪಟ್ಟ, ಗ್ರಂಥಜಾಲೈಃ= ಗ್ರಂಥಸಮೂಹಗಳಿಂದ, ಪ್ರವಾಚಾಂ= ಪ್ರಕೃಷ್ಟವಾಗ್ಮಿಗಳಾದ, ಪ್ರಾಚಾಂ= ಪ್ರಾಚೀನರ, ವಾಚಃ= ಗ್ರಂಥಗಳು, ಉಪ-ಚಯಂ= ಪ್ರಸಿದ್ಧಿಯನ್ನು, ಅಭಜನ್= ಪಡೆದವೋ, ಸಂಖ್ಯಾವಂತಃ= ಜ್ಞಾನಿಗಳು, ಯಂ= ಯಾರನ್ನು, ಅಖಿಲಕಲಾಮೂರ್ತಿಂ= ಸಕಲಕಲಾಮೂರ್ತಿ ಎಂಬುದಾಗಿ, ಮುಹುಃ= ಪುನಃ ಪುನಃ, ಆಹುಃ= ಹೇಳಿದರೋ, ಸಃ= ಅಂತಹ, ಉದ್ವೇಲಕೀರ್ತಿಃ= ಅಪರಿಮಿತವಾದ ಕೀರ್ತಿಯುಳ್ಳ, ಧೀರಶ್ರೀರಾಘವೇಂದ್ರಃ= ಜ್ಞಾನಿಗಳಾದ ಶ್ರೀರಾಘವೇಂದ್ರತೀರ್ಥರು, ನಃ= ನಮಗೆ, ಸತತಂ= ಯಾವಾಗಲೂ, ಅವ್ಯಾಹತಂ= ತಡೆಯಿಲ್ಲದ, ಭವ್ಯಂ= ಕ್ಷೇಮವವನ್ನು, ದಿಶತು= ಕೊಡಲಿ.

ಭಾವಾರ್ಥ :

ಅಜ್ಞಾನದ ಕತ್ತಲೆಯನ್ನು ಕಳೆದು ಜ್ಞಾನದ ಬೆಳಕನ್ನು ಬೀರುವ ನಿರ್ದುಷ್ಟವಾದ ಅನೇಕ ಗ್ರಂಥಗಳನ್ನು ವಿದ್ವಾಂಸರ ಪ್ರಾರ್ಥನೆಯಂತೆ ಶ್ರೀರಾಘವೇಂದ್ರರು ರಚಿಸಿದ್ದಾರೆ. ಅವುಗಳಿಂದ ವ್ಯಾಸಮಧ್ವಜಯತೀರ್ಥರೇ ಮೊದಲಾದ ಜ್ಞಾನಿವರೇಣ್ಯರ ಗ್ರಂಥಗಳ ಭಾವವನ್ನು ಜಿಜ್ಞಾಸುಗಳು

ಅರಿಯುವಂತಾಯಿತು. ಪ್ರಾಚೀನರ ಪ್ರೌಢಗ್ರಂಥಗಳು ಬೆಳಕಿಗೆ ಬರುವಂತಾಯಿತು. ಶ್ರೀರಾಘವೇಂದ್ರರು ಗ್ರಂಥಕರ್ತರು ಮಾತ್ರವಾಗಿರದೇ ಸಮಸ್ತಕಲೆಗಳನ್ನು ಬಲ್ಲವರಾಗಿದ್ದರು. ಜ್ಞಾನಿಗಳು ಇವರನ್ನು 'ಸಕಲ-ಕಲಾಮೂರ್ತಿ' ಎಂದು ಯಾವಾಗಲೂ ಪ್ರಶಂಸಿಸುತ್ತಾರೆ. ಇಂತಹ ಕೀರ್ತಿ-ಶಾಲಿಗಳಾದ ಶ್ರೀಗುರುಸಾರ್ವಭೌಮರು ನಮಗೆ ನಿರಂತರ ಮಂಗಳ-ವನ್ನುಂಟು ಮಾಡಲಿ.

### ಉಪೇಂದ್ರತೀರ್ಥರ ಸ್ತುತಿ

ये रामव्यासपादप्रणिहितमनसोमध्वतन्त्रप्रतिष्ठा
धुर्यामर्यादसंवित्सुमहितसुमतीन्द्रार्यशिष्याग्रगण्याः ।
नित्यत्रय्यन्तचिन्तापरिणतविशदाशेषतत्वाववोध-
प्रख्यातांस्तानुपेन्द्रव्रतिविबुधमणीन् देशिकानाश्रयेऽहम् ॥ ११ ॥

**ಯೇ ರಾಮವ್ಯಾಸಪಾದಪ್ರಣಿಹಿತಮನಸೋ ಮಧ್ವತಂತ್ರಪ್ರತಿಷ್ಠಾ**
**ಧುರ್ಯಾಮರ್ಯಾದಸಂವಿತ್ಸುಮಹಿತಸುಮತೀಂದ್ರಾರ್ಯಶಿಷ್ಯಾಗ್ರಗಣ್ಯಾಃ।**
**ನಿತ್ಯತ್ರಯ್ಯಂತಚಿಂತಾಪರಿಣತವಿಶದಾಶೇಷತತ್ತ್ವಾವಬೋಧ**
**ಪ್ರಖ್ಯಾತಾಂಸ್ತಾನುಪೇಂದ್ರವ್ರತಿವಿಬುಧಮಣೀನ್ ದೇಶಿಕಾನಾಶ್ರಯೇಽಹಂ ॥**

ಅನ್ವಯಾರ್ಥ :

ಯೇ= ಯಾರು, ರಾಮವ್ಯಾಸಪಾದಪ್ರಣಿಹಿತಮನಸಃ - ರಾಮ= ಮೂಲ ರಾಮಚಂದ್ರದೇವರು, ವ್ಯಾಸ= ವೇದವ್ಯಾಸದೇವರು ಇವರುಗಳ, ಪಾದ= ಪಾದ ಪದ್ಮಗಳಲ್ಲಿ ಪ್ರಣಿಹಿತ= ಇಡಲ್ಪಟ್ಟ, ಮನಸಃ= ಮನಸ್ಸುಳ್ಳವರೋ, ಮಧ್ವ-ತಂತ್ರ-ಪ್ರತಿಷ್ಠಾಧುರ್ಯಾಮರ್ಯಾದಸಂವಿತ್ಸುಮಹಿತಸುಮತೀಂದ್ರಾರ್ಯಶಿಷ್ಯಾಗ್ರ-

ಭಾವಾರ್ಥ :

ಮುಮುಕ್ಷುಗಳಾದ ಜೀವರು ಕರ್ಮಯೋಗ ಜ್ಞಾನಯೋಗ ಮೊದಲಾದ ಸಾಧನಗಳನ್ನು ಅನುಷ್ಠಾನ ಮಾಡಬೇಕೆಂದು ಶಾಸ್ತ್ರಗಳಲ್ಲಿ ಹೇಳಿದ್ದಾರೆ. ಕರ್ಮಯೋಗಕ್ಕೆ ದೇಹದಾರ್ಢ್ಯ ಬೇಕು. ಜ್ಞಾನಯೋಗಕ್ಕೆ ಬುದ್ಧಿಶಕ್ತಿ ಬೇಕು. ಆದರೆ ಅವೆರಡೂ ಇಲ್ಲದ ನಾನು ಈಗಂತೂ ಕರ್ಮಯೋಗ ಜ್ಞಾನಯೋಗಗಳನ್ನು ಅನುಷ್ಠಾನ ಮಾಡಲಾರೆ. ಆದರೂ ಮೋಕ್ಷಸಾಧನಗಳಲ್ಲಿ ಅತ್ಯಾವಶ್ಯಕವೆಂದು ಪರಿಗಣಿತವಾದ ಗುರುಪ್ರಸಾದವನ್ನು ಸಂಪಾದಿಸಲು ಶ್ರೀರಾಘವೇಂದ್ರರ ಚರಿತ್ರೆಯನ್ನು ವರ್ಣಿಸುವೆನು. ಅವರ ಪ್ರಸಾದದಿಂದ ಸಕಲ ಸಾಧನಗಳು ಕೈಗೂಡುವಂತಾಗಲಿ.

### ಸ್ವಾಹಂಕಾರ ಖಂಡನ

**एष श्रीराघवेन्द्रव्रतिवरचरिताम्भोनिधिः क्वातिवेलः**
**क्वासौ खद्योतपोतप्रमुषितविभवश्चेतसो नः प्रकाशः ।**
**वन्ध्यैवातः प्रतिज्ञा तदतुलनिखिलाश्चर्यचर्याभिधाने**
**स्थानेथापि क्वचित्स्यादिह पुनरुदधिस्नानसङ्कल्पवत्सा ॥ १३ ॥**

**ಏಷ ಶ್ರೀ ರಾಘವೇಂದ್ರ ವ್ರತಿವರ ಚರಿತಾಂಭೋನಿಧಿಃ ಕ್ವಾತಿವೇಲಃ**
**ಕ್ವಾಸೌ ಖದ್ಯೋತಪೋತಪ್ರಮುಷಿತವಿಭವಶ್ಚೇತಸೋ ನಃ ಪ್ರಕಾಶಃ ।**
**ವಂಧ್ಯೈವಾತಃ ಪ್ರತಿಜ್ಞಾ ತದತುಲನಿಖಿಲಾಶ್ಚರ್ಯಚರ್ಯಾಭಿಧಾನೇ**
**ಸ್ಥಾನೇಥಾಪಿ ಕ್ವಚಿತ್ ಸ್ಯಾದಿಹ ಪುನರುದಧಿಸ್ನಾನಸಂಕಲ್ಪವತ್ ಸಾ ॥ 13 ॥**

ಅನ್ವಯಾರ್ಥ :

ಏಷಃ= ಈ, ಅತಿವೇಲಃ= ಮಹತ್ತರವಾದ, ಶ್ರೀರಾಘವೇಂದ್ರವ್ರತಿವರ-ಚರಿತಾಂಭೋನಿಧಿಃ-ಶ್ರೀರಾಘವೇಂದ್ರವ್ರತಿವರ=ರಾಘವೇಂದ್ರಯತಿ ವರೇಣ್ಯರ,

ಚರಿತ= ಚರಿತ್ರೆಯೆಂಬ, ಅಂಭೋನಿಧಿಃ= ಸಮುದ್ರವು, ಕ್ವ= ಎಲ್ಲಿ?, ಖದ್ಯೋತ-ಪೋತಪ್ರಮುಷಿತವಿಭವಃ - ಖದ್ಯೋತ= ಮಿಣುಕುಹುಳದ, ಪೋತ= ಮರಿಯಾದ ಸಣ್ಣಹುಳದಿಂದ, ಪ್ರಮುಷಿತ= ಅಪಹರಿಸಲ್ಪಟ್ಟ, ವಿಭವಃ= ಶಕ್ತಿಯುಳ್ಳ, ನಃ= ನಮ್ಮ, ಚೇತಸಃ= ಬುದ್ಧಿಯ, ಅಸೌ= ಈ, ಪ್ರಕಾಶಃ= ಪ್ರಕಾಶವು, ಕ್ವ= ಎಲ್ಲಿ?, ಅತಃ= ಆದ್ದರಿಂದ, ತದತುಲನಿಖಿಲಾಶ್ಚರ್ಯಚರ್ಯಾಭಿಧಾನೇ - ತತ್= ಆ ಗುರುಗಳ, ಅತುಲ= ಅನುಪಮವಾದ, ನಿಖಿಲ= ಎಲ್ಲ, ಆಶ್ಚರ್ಯ= ಆಶ್ಚರ್ಯಜನಕವಾದ, ಚರ್ಯ= ಚರಿತೆಯ, ಅಭಿಧಾನೇ= ವರ್ಣನೆಯ ವಿಷಯದಲ್ಲಿ, ಪ್ರತಿಜ್ಞಾ= ಪ್ರತಿಜ್ಞೆಯು, ವಂಧ್ಯೈವ= ನಿಷ್ಫಲವೇ ಸರಿ. ಅಥಾಪಿ ಪುನಃ= ಹಾಗಿದ್ದರೂ, ಉದಧಿಸ್ನಾನಸಂಕಲ್ಪವತ್= ಸಮುದ್ರಸ್ನಾನಸಂಕಲ್ಪದಂತೆ, ಸಾ= ಆ ಪ್ರತಿಜ್ಞೆಯು, ಕ್ವಚಿತ್= ಯಾವುದಾದರೂ ಒಂದು ಅಂಶದಲ್ಲಿ, ಸ್ಥಾನೇ ಸ್ಯಾತ್= ಸಫಲವಾದೀತು.

ಭಾವಾರ್ಥ :

ಶ್ರೀರಾಘವೇಂದ್ರ ಗುರುಗಳ ಚರಿತ್ರೆ ಸಾಗರದಂತೆ ಅಪಾರ. ನಮ್ಮ ಬುದ್ಧಿಯ ಬೆಳಕಾದರೂ ಮಿಣುಕುಹುಳದ ಬೆಳಕಿಗಿಂತಲೂ ಅಲ್ಪ. ಆದ್ದರಿಂದ ಗುರುಗಳ ಚರಿತ್ರೆಯನ್ನು ವರ್ಣಿಸುತ್ತೇನೆಂಬ ಪ್ರತಿಜ್ಞೆಯನ್ನು ಪೂರೈಸುವುದು ಅಶಕ್ಯವೇ ಸರಿ. ಆದರೂ ಸಮುದ್ರಸ್ನಾನದ ಸಂಕಲ್ಪಮಾಡಿ, ದಡಕ್ಕೆ ಬಂದ ಒಂದು ಅಲೆಯಲ್ಲಿ ಮುಳುಗಿ ಸಂಕಲ್ಪವನ್ನು ಪೂರೈಸಿಕೊಂಡಂತೆ ನಾನೂ ಕೂಡ ಗುರುಗಳ ಚರಿತ್ರೆಯ ಲೇಶವನ್ನು ಮಾತ್ರ ವರ್ಣಿಸಿ ಪ್ರತಿಜ್ಞೆಯನ್ನು ಪೂರೈಸಿಕೊಳ್ಳುತ್ತೇನೆ.

### ಗುರುಗಳ ಜ್ಞಾನಜ್ಯೋತಿ

यद्भानौ यत्कृशानौ यदमृतकिरणे यद्ग्रहेषूदितेषु
ज्योतिर्यत्तारकासु प्रथितमणिषु यच्च सौदामिनीषु ।

सम्भूयैतत् समस्तं त्वदमितहृदयाकाशनिर्यत्प्रकाशे
धीर श्रीराघवेन्द्र व्रतिवर भजते हन्त खद्योतरीतिम् ॥ १४ ॥

**ಯದ್ಭಾನೌ ಯತ್ಕೃಶಾನೌ ಯದಮೃತಕಿರಣೇ ಯದ್ಗ್ರಹೇಷೂದಿತೇಷು**
**ಜ್ಯೋತಿರ್ಯತ್ತಾರಕಾಸು ಪ್ರಥಿತಮಣಿಷು ಯದ್ಯಚ್ಚ ಸೌದಾಮಿನೀಷು**
**ಸಂಭೂಯೈತತ್ ಸಮಸ್ತಂ ತ್ವದಮಿತಹೃದಯಾಕಾಶನಿರ್ಯತ್ಪ್ರಕಾಶೇ**
**ಧೀರ ಶ್ರೀ ರಾಘವೇಂದ್ರ ವ್ರತಿವರ ಭಜತೇ ಹಂತ ಖದ್ಯೋತರೀತಿಂ ॥ 14 ॥**

ಅನ್ವಯಾರ್ಥ :

ಧೀರಶ್ರೀರಾಘವೇಂದ್ರವ್ರತಿವರ!= ಜ್ಞಾನಿಗಳಾದ ಶ್ರೀರಾಘವೇಂದ್ರಯತಿ-ಶ್ರೇಷ್ಠರೇ!, ಭಾನೌ= ಸೂರ್ಯನಲ್ಲಿ, ಯತ್ ಜ್ಯೋತಿಃ= ಯಾವ ಬೆಳಕು ಇದೆಯೋ, ಕೃಶಾನೌ= ಅಗ್ನಿಯಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಅಮೃತಕಿರಣೇ= ಅಮೃತದ ಕಿರಣದಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಉದಿತೇಷು= ಉದಯಿಸಿದ, ಗ್ರಹೇಷು= ಗ್ರಹಗಳಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ತಾರಕಾಸು= ನಕ್ಷತ್ರಗಳಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಪ್ರಥಿತಮಣಿಷು= ಪ್ರಸಿದ್ಧವಾದ ಮಣಿಗಳಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಸೌದಾಮಿನೀಷು ಚ= ಮಿಂಚುಗಳಲ್ಲಿಯೂ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಏತತ್ ಸಮಸ್ತಂ= ಇದೆಲ್ಲವೂ, ಸಂಭೂಯ= ಒಟ್ಟುಗೂಡಿ, ತ್ವದಮಿತಹೃದಯಾಕಾಶನಿರ್ಯತ್ಪ್ರಕಾಶೇ - ತ್ವತ್= ನಿಮ್ಮ, ಅಮಿತ= ಅಪರಿಮಿತವಾದ, ಹೃದಯಾಕಾಶ= ಹೃದಯಾಕಾಶದಿಂದ, ನಿರ್ಯತ್= ಹೊರಹೊಮ್ಮುವ, ಪ್ರಕಾಶೇ= ಜ್ಞಾನದ ಬೆಳಕಿನ ಮುಂದೆ, ಖದ್ಯೋತರೀತಿಂ= ಮಿಣುಕುಹುಳದ ಅವಸ್ಥೆಯನ್ನು, ಭಜತೇ= ಹೊಂದುತ್ತದೆ. ಹಂತ= ಅಶ್ಚರ್ಯವು.

ಭಾವಾರ್ಥ :

ಜ್ಞಾನಿಗಳಾದ ಗುರುಗಳೇ! ನಿಮ್ಮ ಹೃದಯಾಕಾಶದಿಂದ ಹೊರಹೊಮ್ಮುವ ಜ್ಞಾನದ ಬೆಳಕು ಅಪಾರ. ಸೂರ್ಯ, ಅಗ್ನಿ, ಅಮೃತದ ಕಿರಣ, ಉದಿಸಿದ ಗ್ರಹಗಳು, ನಕ್ಷತ್ರಗಳು, ಪ್ರಸಿದ್ಧವಾದ ವಜ್ರವೇ ಮೊದಲಾದ ಮಣಿಗಳೂ, ಮಿಂಚು ಇವೆಲ್ಲವುಗಳ ಒಟ್ಟುಗೂಡಿದ ಬೆಳಕಿನ ಪುಂಜವೂ ನಿಮ್ಮ ಜ್ಞಾನದ ಬೆಳಕಿನ ಮುಂದೆ ಮಿಣುಕುಹುಳದ ಬೆಳಕಿನಂತೆ ಅತ್ಯಲ್ಪವಾಗಿ ಗೋಚರಿಸುವುದು.

*ಗುರುವಿರಚಿತ ಗ್ರಂಥಗಳ ಶೈಲಿ*

**चित्ते नायुक्तमर्थं कलयति सहसा नाभिधत्ते न सद्भिः**
**साकं मीमांसते वा न लिखति वचसोद्घाटयत्याशयं स्वम् ।**
**उक्तं नो वक्ति भूयः क्वचिदपि लिखितं नैव निर्मार्ष्टि तस्मा-**
**दस्माभिः सत्प्रबन्धप्रणयनविषये स्तूयते राघवेन्द्रः ॥ १५ ॥**

**ಚಿತ್ತೇ ನಾಯುಕ್ತಮರ್ಥಂ ಕಲಯತಿ ಸಹಸಾ ನಾಭಿಧತ್ತೇ ನ ಸದ್ಭಿಃ**
**ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಂ ।**
**ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ ನೈವ ನಿರ್ಮಾರ್ಷ್ಟಿ ತಸ್ಮಾದ್**
**ಅಸ್ಮಾಭಿಃ ಸತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ ॥ 15॥**

ಅನ್ವಯಾರ್ಥ :

ರಾಘವೇಂದ್ರಃ= ಶ್ರೀರಾಘವೇಂದ್ರತೀರ್ಥರು, ಅಯುಕ್ತಂ= ಸರಿಯಲ್ಲದ ವಿಷಯವನ್ನು, ಚಿತ್ತೇ= ಮನಸ್ಸಿನಲ್ಲಿ, ನ ಕಲಯತಿ= ಚಿಂತಿಸುವುದಿಲ್ಲ. ಸಹಸಾ= ಕೂಡಲೇ (ಯೋಚಿಸದೇ), ನ ಅಭಿಧತ್ತೇ= ಯಾವುದನ್ನೂ ನುಡಿಯುವುದಿಲ್ಲ. ಸದ್ಭಿಃ ಸಾಕಂ= ಪೂಜ್ಯರೊಂದಿಗೆ, ಅಯುಕ್ತಂ ನ ಮೀಮಾಂಸತೇ= ಒಣ ಚರ್ಚೆಗೆ

ತೊಡಗುವುದಿಲ್ಲ. ಅಯುಕ್ತಂ= ತಪ್ಪನ್ನು, ನ ಲಿಖತಿ= ಬರೆಯುವುದಿಲ್ಲ. ವಚಸಾ= ಮಾತಿನಿಂದ, ಸ್ವಂ ಆಶಯಂ= ತಮ್ಮದೇ ಆದ ಅಭಿಪ್ರಾಯವನ್ನು, ನ ಉದ್ಘಾಟಯತಿ= ಪ್ರಕಟಪಡಿಸುವುದಿಲ್ಲ. ಉಕ್ತಂ= ಒಂದು ಬಾರಿ ಹೇಳಿದ್ದನ್ನು, ಭೂಯಃ= ಮತ್ತೊಮ್ಮೆ, ನೋ ವಕ್ತಿ= ಹೇಳುವುದಿಲ್ಲ. ಕ್ವಚಿದಪಿ= ಎಲ್ಲಿಯೂ, ಲಿಖಿತಂ= ಬರೆದದ್ದನ್ನು, ನೈವ ನಿರ್ಮಾರ್ಷ್ಟಿ= ಅಳಿಸುವುದೇ ಇಲ್ಲ. ತಸ್ಮಾತ್= ಆದ್ದರಿಂದ, ಅಸ್ಮಾಭಿಃ= ನಮ್ಮಿಂದ, ಸತ್ಪ್ರಬಂಧಪ್ರಣಯನವಿಷಯೇ= ಸಮೀಚೀನಪ್ರಬಂಧಗಳ ರಚನೆಯ ವಿಷಯದಲ್ಲಿ, ರಾಘವೇಂದ್ರಃ= ಶ್ರೀರಾಘವೇಂದ್ರಗುರುಸಾರ್ವಭೌಮರು, ಸ್ತೂಯತೇ= ಸ್ತುತಿಸಲ್ಪಡುತ್ತಾರೆ.

ಭಾವಾರ್ಥ :

ಶ್ರೀರಾಘವೇಂದ್ರಗುರುಸಾರ್ವಭೌಮರು ಅಯುಕ್ತವಾದುದನ್ನು ಮನಸಾಪಿ ಯೋಚಿಸುವುದಿಲ್ಲ. ವಿಚಾರ ಮಾಡದೇ ಯಾವುದನ್ನೂ ನುಡಿಯುವುದಿಲ್ಲ. ಸಜ್ಜನರೊಂದಿಗೆ ಒಣ ಚರ್ಚೆ ಮಾಡುವುದಿಲ್ಲ. ಅಯುಕ್ತವಾದುದನ್ನು ಬರೆಯುವುದಿಲ್ಲ. ಇತರ ಜ್ಞಾನಿಗಳ ಅಭಿಪ್ರಾಯವನ್ನು ಅನುವಾದ ಮಾಡುತ್ತಾರೆ. ಆದರೆ ಎಲ್ಲಿಯೂ ನಮ್ಮದೇ ಒಂದು ಬೇರೆ ಅಭಿಪ್ರಾಯವಿದೆಯೆಂದು ಪ್ರಕಟಪಡಿಸುವುದಿಲ್ಲ. ಅವರ ಗ್ರಂಥದಲ್ಲಿ ಎಲ್ಲಿಯೂ ಪುನರುಕ್ತಿ ಇಲ್ಲ. ಬರೆದದ್ದನ್ನು ಅಳಿಸಿದ್ದಿಲ್ಲ. ಅವರ ಗ್ರಂಥಗಳನ್ನು ಅವಲೋಕಿಸಿದಾಗ ಈ ಗುಣಗಳು ಎದ್ದು ಕಾಣುತ್ತವೆ. ಆದ್ದರಿಂದ ನಮ್ಮ ಪ್ರಬಂಧಗಳೂ ಯಶಸ್ವಿಯಾಗಲೆಂದು ನಾವು ಪ್ರಬಂಧರಚನೆ ಮಾಡುವಾಗ ಗುರುಸಾರ್ವಭೌಮರನ್ನು ಸ್ತುತಿಸುತ್ತೇವೆ.

### ಅಣುಮಧ್ವವಿಜಯವ್ಯಾಖ್ಯಾನದ ಫಲ

धीरश्रीराघवेन्द्रं कृतनिजविजयस्रग्धरार्थप्रकाशं
दृष्ट्वा सन्तुष्टचेता दशमतिरचिरादभ्यषिञ्चत्पदे स्वे ।

**नूनं वाणी तदीयाननननलिनगता तत्कृतस्वप्रियैक**
**प्रत्यासङ्गप्रहृष्टा स्वयमपि तदनु स्वे पदे चाभ्यषिञ्चत् ॥ १६ ॥**

**ಧೀರ ಶ್ರೀರಾಘವೇಂದ್ರಂ ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ**
**ದೃಷ್ಟ್ವಾ ಸಂತುಷ್ಟಚೇತಾ ದಶಮತಿರಚಿರಾದಭ್ಯಷಿಂಚತ್ ಪದೇ ಸ್ವೇ ।**
**ನೂನಂ ವಾಣೀ ತದೀಯಾನನನಲಿನಗತಾ ತತ್ಕೃತಸ್ವಪ್ರಿಯೈಕ-**
**ಪ್ರತ್ಯಾಸಂಗಪ್ರಹೃಷ್ಟಾ ಸ್ವಯಮಪಿ ತದನು ಸ್ವೇ ಪದೇ ಚಾಭ್ಯಷಿಂಚತ್ ॥16॥**

ಅನ್ವಯಾರ್ಥ :

ದಶಮತಿಃ= ಶ್ರೀಮದಾನಂದತೀರ್ಥರು, ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ - ಕೃತ= ಮಾಡಲ್ಪಟ್ಟ, ನಿಜವಿಜಯ= ತಮ್ಮ ವಿಜಯವನ್ನು ವರ್ಣಿಸಿರುವ, ಸ್ರಗ್ಧರಾ= ಸ್ರಗ್ಧರಾವೃತ್ತದ ಕಾವ್ಯದ, ಅರ್ಥಪ್ರಕಾಶಂ= ಅರ್ಥವಿವರಣೆಯುಳ್ಳ, ಧೀರ ಶ್ರೀರಾಘವೇಂದ್ರಂ= ಜ್ಞಾನಿಗಳಾದ ಶ್ರೀರಾಘವೇಂದ್ರತೀರ್ಥರನ್ನು, ದೃಷ್ಟ್ವಾ= ನೋಡಿ, ಸಂತುಷ್ಟಚೇತಾಃ= ಸಂತಸಗೊಂಡ ಮನಸ್ಸುಳ್ಳವರಾಗಿ, ಅಚಿರಾತ್= ಕೂಡಲೇ, ಸ್ವೇ ಪದೇ= ತಮ್ಮ ಪೀಠದಲ್ಲಿ, ಅಭ್ಯಷಿಂಚತ್= ಪಟ್ಟಾಭಿಷೇಕ ಮಾಡಿದರು. ತದೀಯಾನನನಲಿನಗತಾ - ತದೀಯ= ಆ ರಾಘವೇಂದ್ರ ಗುರುಗಳದ್ದಾದ, ಆನನನಲಿನ= ಮುಖಕಮಲದಲ್ಲಿ, ಗತಾ= ಇರುವ, ವಾಣೀ= ವಾಗ್ದೇವಿಯಾದ ಭಾರತೀದೇವಿಯು, ತತ್ಕೃತಸ್ವಪ್ರಿಯೈಕಪ್ರತ್ಯಾಸಂಗಪ್ರಹೃಷ್ಟಾ - ತತ್= ಆ ರಾಘವೇಂದ್ರರಿಂದ, ಕೃತ= ಮಾಡಲ್ಪಟ್ಟ, ಸ್ವ= ತನ್ನ, ಪ್ರಿಯ= ಪತಿಯಾದ ವಾಯುದೇವರ, ಏಕ= ಮುಖ್ಯವಾದ, ಪ್ರತ್ಯಾಸಂಗ= ಸಂಬಂಧದಿಂದ, ಪ್ರಹೃಷ್ಟಾ= ಸಂತೋಷಗೊಂಡವಳಾಗಿ, ಸ್ವಯಮಪಿ= ತಾನೂ ಕೂಡ, ಸ್ವೇ ಪದೇ= ತನ್ನ ಸಾರಸ್ವತ ಸಾಮ್ರಾಜ್ಯದಲ್ಲಿ , ನೂನಂ ಅಭ್ಯಷಿಂಚತ್= ಅಭಿಷೇಕಗೈದಳು.

सम्भूयैतत् समस्तं त्वदमितहृदयाकाशनिर्यत्प्रकाशे
धीर श्रीराघवेन्द्र व्रतिवर भजते हन्त खद्योतरीतिम् ॥ १४ ॥

**ಯದ್ಭಾನೌ ಯತ್ಕೃಶಾನೌ ಯದಮೃತಕಿರಣೇ ಯದ್ಗ್ರಹೇಷೂದಿತೇಷು**
**ಜ್ಯೋತಿರ್ಯತ್ತಾರಕಾಸು ಪ್ರಥಿತಮಣಿಷು ಯದ್ಯಚ್ಚ ಸೌದಾಮಿನೀಷು**
**ಸಂಭೂಯೈತತ್ ಸಮಸ್ತಂ ತ್ವದಮಿತಹೃದಯಾಕಾಶನಿರ್ಯತ್ಪ್ರಕಾಶೇ**
**ಧೀರ ಶ್ರೀ ರಾಘವೇಂದ್ರ ವ್ರತಿವರ ಭಜತೇ ಹಂತ ಖದ್ಯೋತರೀತಿಂ ॥ 14 ॥**

ಅನ್ವಯಾರ್ಥ :

ಧೀರಶ್ರೀರಾಘವೇಂದ್ರವ್ರತಿವರ!= ಜ್ಞಾನಿಗಳಾದ ಶ್ರೀರಾಘವೇಂದ್ರಯತಿ-ಶ್ರೇಷ್ಠರೇ!, ಭಾನೌ= ಸೂರ್ಯನಲ್ಲಿ, ಯತ್ ಜ್ಯೋತಿಃ= ಯಾವ ಬೆಳಕು ಇದೆಯೋ, ಕೃಶಾನೌ= ಅಗ್ನಿಯಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಅಮೃತಕಿರಣೇ= ಅಮೃತದ ಕಿರಣದಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಉದಿತೇಷು= ಉದಯಿಸಿದ, ಗ್ರಹೇಷು= ಗ್ರಹಗಳಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ತಾರಕಾಸು= ನಕ್ಷತ್ರಗಳಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಪ್ರಥಿತಮಣಿಷು= ಪ್ರಸಿದ್ಧವಾದ ಮಣಿಗಳಲ್ಲಿ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಸೌದಾಮಿನೀಷು ಚ= ಮಿಂಚುಗಳಲ್ಲಿಯೂ, ಯತ್ ಜ್ಯೋತಿಃ= ಯಾವ ಬೆಳಕಿದೆಯೋ, ಏತತ್ ಸಮಸ್ತಂ= ಇದೆಲ್ಲವೂ, ಸಂಭೂಯ= ಒಟ್ಟುಗೂಡಿ, ತ್ವದಮಿತಹೃದಯಾಕಾಶನಿರ್ಯತ್ಪ್ರಕಾಶೇ - ತ್ವತ್= ನಿಮ್ಮ, ಅಮಿತ= ಅಪರಿಮಿತವಾದ, ಹೃದಯಾಕಾಶ= ಹೃದಯಾಕಾಶದಿಂದ, ನಿರ್ಯತ್= ಹೊರಹೊಮ್ಮುವ, ಪ್ರಕಾಶೇ= ಜ್ಞಾನದ ಬೆಳಕಿನ ಮುಂದೆ, ಖದ್ಯೋತರೀತಿಂ= ಮಿಣುಕುಹುಳದ ಅವಸ್ಥೆಯನ್ನು, ಭಜತೇ= ಹೊಂದುತ್ತದೆ. ಹಂತ= ಆಶ್ಚರ್ಯವು.

ಭಾವಾರ್ಥ :

ಜ್ಞಾನಿಗಳಾದ ಗುರುಗಳೇ! ನಿಮ್ಮ ಹೃದಯಾಕಾಶದಿಂದ ಹೊರಹೊಮ್ಮುವ ಜ್ಞಾನದ ಬೆಳಕು ಅಪಾರ. ಸೂರ್ಯ, ಅಗ್ನಿ, ಅಮೃತದ ಕಿರಣ, ಉದಿಸಿದ ಗ್ರಹಗಳು, ನಕ್ಷತ್ರಗಳು, ಪ್ರಸಿದ್ಧವಾದ ವಜ್ರವೇ ಮೊದಲಾದ ಮಣಿಗಳೂ, ಮಿಂಚು ಇವೆಲ್ಲವುಗಳ ಒಟ್ಟುಗೂಡಿದ ಬೆಳಕಿನ ಪುಂಜವೂ ನಿಮ್ಮ ಜ್ಞಾನದ ಬೆಳಕಿನ ಮುಂದೆ ಮಿಣುಕುಹುಳದ ಬೆಳಕಿನಂತೆ ಅತ್ಯಲ್ಪವಾಗಿ ಗೋಚರಿಸುವುದು.

*ಗುರುವಿರಚಿತ ಗ್ರಂಥಗಳ ಶೈಲಿ*

**चित्ते नायुक्तमर्थं कलयति सहसा नाभिधत्ते न सद्भिः**
**साकं मीमांसते वा न लिखति वचसोद्घाटयत्याशयं स्वम् ।**
**उक्तं नो वक्ति भूयः क्वचिदपि लिखितं नैव निर्माष्टि तस्मा-**
**दस्माभिः सत्प्रबन्धप्रणयनविषये स्तूयते राघवेन्द्रः ॥ १५ ॥**

**ಚಿತ್ತೇ ನಾಯುಕ್ತಮರ್ಥಂ ಕಲಯತಿ ಸಹಸಾ ನಾಭಿಧತ್ತೇ ನ ಸದ್ಭಿಃ**
**ಸಾಕಂ ಮೀಮಾಂಸತೇ ವಾ ನ ಲಿಖತಿ ವಚಸೋದ್ಘಾಟಯತ್ಯಾಶಯಂ ಸ್ವಂ ।**
**ಉಕ್ತಂ ನೋ ವಕ್ತಿ ಭೂಯಃ ಕ್ವಚಿದಪಿ ಲಿಖಿತಂ ನೈವ ನಿರ್ಮಾರ್ಷ್ಟಿ ತಸ್ಮಾದ್**
**ಅಸ್ಮಾಭಿಃ ಸತ್ಪ್ರಬಂಧಪ್ರಣಯನವಿಷಯೇ ಸ್ತೂಯತೇ ರಾಘವೇಂದ್ರಃ ॥15॥**

ಅನ್ವಯಾರ್ಥ :

ರಾಘವೇಂದ್ರಃ= ಶ್ರೀರಾಘವೇಂದ್ರತೀರ್ಥರು, ಅಯುಕ್ತಂ= ಸರಿಯಲ್ಲದ ವಿಷಯವನ್ನು, ಚಿತ್ತೇ= ಮನಸ್ಸಿನಲ್ಲಿ, ನ ಕಲಯತಿ= ಚಿಂತಿಸುವುದಿಲ್ಲ. ಸಹಸಾ= ಕೂಡಲೇ (ಯೋಚಿಸದೇ), ನ ಅಭಿಧತ್ತೇ= ಯಾವುದನ್ನೂ ನುಡಿಯುವುದಿಲ್ಲ. ಸದ್ಭಿಃ ಸಾಕಂ= ಪೂಜ್ಯರೊಂದಿಗೆ, ಅಯುಕ್ತಂ ನ ಮೀಮಾಂಸತೇ= ಒಣ ಚರ್ಚೆಗೆ

ತೊಡಗುವುದಿಲ್ಲ. ಅಯುಕ್ತಂ= ತಪ್ಪನ್ನು, ನ ಲಿಖತಿ= ಬರೆಯುವುದಿಲ್ಲ. ವಚಸಾ= ಮಾತಿನಿಂದ, ಸ್ವಂ ಆಶಯಂ= ತಮ್ಮದೇ ಆದ ಅಭಿಪ್ರಾಯವನ್ನು, ನ ಉದ್ಘಾಟಯತಿ= ಪ್ರಕಟಪಡಿಸುವುದಿಲ್ಲ. ಉಕ್ತಂ= ಒಂದು ಬಾರಿ ಹೇಳಿದ್ದನ್ನು, ಭೂಯಃ= ಮತ್ತೊಮ್ಮೆ, ನೋ ವಕ್ತಿ= ಹೇಳುವುದಿಲ್ಲ. ಕ್ವಚಿದಪಿ= ಎಲ್ಲಿಯೂ, ಲಿಖಿತಂ= ಬರೆದದ್ದನ್ನು, ನೈವ ನಿರ್ಮಾರ್ಷ್ಟಿ= ಅಳಿಸುವುದೇ ಇಲ್ಲ. ತಸ್ಮಾತ್= ಆದ್ದರಿಂದ, ಅಸ್ಮಾಭಿಃ= ನಮ್ಮಿಂದ, ಸತ್ಪ್ರಬಂಧಪ್ರಣಯನವಿಷಯೇ= ಸಮೀಚೀನಪ್ರಬಂಧಗಳ ರಚನೆಯ ವಿಷಯದಲ್ಲಿ, ರಾಘವೇಂದ್ರಃ= ಶ್ರೀರಾಘವೇಂದ್ರಗುರು ಸಾರ್ವಭೌಮರು, ಸ್ತೂಯತೇ= ಸ್ತುತಿಸಲ್ಪಡುತ್ತಾರೆ.

ಭಾವಾರ್ಥ:

ಶ್ರೀರಾಘವೇಂದ್ರಗುರುಸಾರ್ವಭೌಮರು ಅಯುಕ್ತವಾದುದನ್ನು ಮನಸಾಪಿ ಯೋಚಿಸುವುದಿಲ್ಲ. ವಿಚಾರ ಮಾಡದೇ ಯಾವುದನ್ನೂ ನುಡಿಯುವುದಿಲ್ಲ. ಸಜ್ಜನರೊಂದಿಗೆ ಒಣ ಚರ್ಚೆ ಮಾಡುವುದಿಲ್ಲ. ಅಯುಕ್ತವಾದುದನ್ನು ಬರೆಯುವುದಿಲ್ಲ. ಇತರ ಜ್ಞಾನಿಗಳ ಅಭಿಪ್ರಾಯವನ್ನು ಅನುವಾದ ಮಾಡುತ್ತಾರೆ. ಆದರೆ ಎಲ್ಲಿಯೂ ನಮ್ಮದೇ ಒಂದು ಬೇರೆ ಅಭಿಪ್ರಾಯವಿದೆಯೆಂದು ಪ್ರಕಟಪಡಿಸುವುದಿಲ್ಲ. ಅವರ ಗ್ರಂಥದಲ್ಲಿ ಎಲ್ಲಿಯೂ ಪುನರುಕ್ತಿ ಇಲ್ಲ. ಬರೆದದ್ದನ್ನು ಅಳಿಸಿದ್ದಿಲ್ಲ. ಅವರ ಗ್ರಂಥಗಳನ್ನು ಅವಲೋಕಿಸಿದಾಗ ಈ ಗುಣಗಳು ಎದ್ದು ಕಾಣುತ್ತವೆ. ಆದ್ದರಿಂದ ನಮ್ಮ ಪ್ರಬಂಧಗಳೂ ಯಶಸ್ವಿಯಾಗಲೆಂದು ನಾವು ಪ್ರಬಂಧರಚನೆ ಮಾಡುವಾಗ ಗುರುಸಾರ್ವಭೌಮರನ್ನು ಸ್ತುತಿಸುತ್ತೇವೆ.

### ಅಣುಮಧ್ವವಿಜಯವ್ಯಾಖ್ಯಾನದ ಫಲ

धीरश्रीराघवेन्द्रं कृतनिजविजयस्रग्धरार्थप्रकाशं
दृष्ट्वा सन्तुष्टचेता दशमतिरचिरादभ्यषिञ्चत्पदे स्वे ।

नूनं वाणी तदीयाननलिनगता तत्कृतस्वप्रियैक
प्रत्यासङ्गप्रहृष्टा स्वयमपि तदनु स्वे पदे चाभ्यषिञ्चत् ॥ १६ ॥

ಧೀರ ಶ್ರೀರಾಘವೇಂದ್ರಂ ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ
ದೃಷ್ಟ್ವಾ ಸಂತುಷ್ಟಚೇತಾ ದಶಮತಿರಚಿರಾದಭ್ಯಷಿಂಚತ್ ಪದೇ ಸ್ವೇ ।
ನೂನಂ ವಾಣೀ ತದೀಯಾನನನಲಿನಗತಾ ತತ್ಕೃತಸ್ವಪ್ರಿಯೈಕ-
ಪ್ರತ್ಯಾಸಂಗಪ್ರಹೃಷ್ಟಾ ಸ್ವಯಮಪಿ ತದನು ಸ್ವೇ ಪದೇ ಚಾಭ್ಯಷಿಂಚತ್ ॥16॥

ಅನ್ವಯಾರ್ಥ :

ದಶಮತಿಃ= ಶ್ರೀಮದಾನಂದತೀರ್ಥರು, ಕೃತನಿಜವಿಜಯಸ್ರಗ್ಧರಾರ್ಥಪ್ರಕಾಶಂ - ಕೃತ= ಮಾಡಲ್ಪಟ್ಟ, ನಿಜವಿಜಯ= ತಮ್ಮ ವಿಜಯವನ್ನು ವರ್ಣಿಸಿರುವ, ಸ್ರಗ್ಧರಾ= ಸ್ರಗ್ಧರಾವೃತ್ತದ ಕಾವ್ಯದ, ಅರ್ಥಪ್ರಕಾಶಂ= ಅರ್ಥವಿವರಣೆಯುಳ್ಳ, ಧೀರ ಶ್ರೀರಾಘವೇಂದ್ರಂ= ಜ್ಞಾನಿಗಳಾದ ಶ್ರೀರಾಘವೇಂದ್ರತೀರ್ಥರನ್ನು, ದೃಷ್ಟ್ವಾ= ನೋಡಿ, ಸಂತುಷ್ಟಚೇತಾಃ= ಸಂತಸಗೊಂಡ ಮನಸ್ಸುಳ್ಳವರಾಗಿ, ಅಚಿರಾತ್= ಕೂಡಲೇ, ಸ್ವೇ ಪದೇ= ತಮ್ಮ ಪೀಠದಲ್ಲಿ, ಅಭ್ಯಷಿಂಚತ್= ಪಟ್ಟಾಭಿಷೇಕ ಮಾಡಿದರು. ತದೀಯಾನನನಲಿನಗತಾ - ತದೀಯ= ಆ ರಾಘವೇಂದ್ರ ಗುರುಗಳದ್ದಾದ, ಆನನನಲಿನ= ಮುಖಕಮಲದಲ್ಲಿ, ಗತಾ= ಇರುವ, ವಾಣೀ= ವಾಗ್ದೇವಿಯಾದ ಭಾರತೀದೇವಿಯು, ತತ್ಕೃತಸ್ವಪ್ರಿಯೈಕಪ್ರತ್ಯಾಸಂಗಪ್ರಹೃಷ್ಟಾ - ತತ್= ಆ ರಾಘವೇಂದ್ರರಿಂದ, ಕೃತ= ಮಾಡಲ್ಪಟ್ಟ, ಸ್ವ= ತನ್ನ, ಪ್ರಿಯ= ಪತಿಯಾದ ವಾಯುದೇವರ, ಏಕ= ಮುಖ್ಯವಾದ, ಪ್ರತ್ಯಾಸಂಗ= ಸಂಬಂಧದಿಂದ, ಪ್ರಹೃಷ್ಟಾ= ಸಂತೋಷಗೊಂಡವಳಾಗಿ, ಸ್ವಯಮಪಿ= ತಾನೂ ಕೂಡ, ಸ್ವೇ ಪದೇ= ತನ್ನ ಸಾರಸ್ವತ ಸಾಮ್ರಾಜ್ಯದಲ್ಲಿ, ನೂನಂ ಅಭ್ಯಷಿಂಚತ್= ಅಭಿಷೇಕಗೈದಳು.

ಭಾವಾರ್ಥ :

ಶ್ರೀರಾಘವೇಂದ್ರಸ್ವಾಮಿಗಳವರು ಪೂರ್ವಾಶ್ರಮದಲ್ಲಿ ವೆಂಕಟನಾಥಾಚಾರ್ಯರಾಗಿದ್ದಾಗ ನಾರಾಯಣಪಂಡಿತಾಚಾರ್ಯರಿಂದ ರಚಿತವಾದ ಶ್ರೀಅಣುಮಧ್ವವಿಜಯಕ್ಕೆ ವ್ಯಾಖ್ಯಾನವನ್ನು ರಚಿಸಿದ್ದರು. ಅದರಿಂದ ಕಾವ್ಯನಾಯಕರಾದ ಶ್ರೀಮದಾಚಾರ್ಯರಿಗೆ 'ನನ್ನ ವಿಜಯದ ಕಾವ್ಯಕ್ಕೆ ವ್ಯಾಖ್ಯಾನ ಮಾಡಿದವರು' ಎಂಬ ಕಾರಣದಿಂದ ಇವರ ಮೇಲೆ ಸಂತೋಷ ಉಂಟಾಯಿತು. ಹಾಗೆಯೇ ವಾಙ್ಮಯ ಪ್ರಪಂಚಾಭಿಮಾನಿಯಾದ ಭಾರತೀದೇವಿಗು ಕೂಡ ನನಗೂ ಮತ್ತು ನನ್ನ ಪತಿಯಾದ ವಾಯುದೇವರಿಗೂ ಅಣುಮಧ್ವವಿಜಯವ್ಯಾಖ್ಯಾನ ಮೂಲಕ ಸಂಬಂಧ ಕಲ್ಪಿಸಿದವರೆಂಬ ಕಾರಣದಿಂದ ಸಂತೋಷ ಉಂಟಾಯಿತು. ಅಂದರೆ ಅಣುಮಧ್ವವಿಜಯಕ್ಕೆ ಇವರು ವ್ಯಾಖ್ಯಾನವನ್ನು ರಚಿಸಿದ್ದರಿಂದ ಶಬ್ದರಾಶಿಗೂ ಹಾಗೂ ವಾಯು ಅಂಶಸಂಭೂತರಾದ ಮಧ್ವಾಚಾರ್ಯರಿಗೂ ಪ್ರತಿಪಾದ್ಯಪ್ರತಿಪಾದಕಭಾವ ಸಂಬಂಧವನ್ನುಕಲ್ಪಿಸಿದಂತಾಯಿತು. ಇದರಿಂದ ಶಬ್ದಪ್ರಪಂಚಕ್ಕೆ ಅಭಿಮಾನಿಯಾದ ಭಾರತೀದೇವಿಯರಿಗೆ ತನ್ನ ಪತಿಯ ಸಂಬಂಧ ಉಂಟಾದ ಸಂತಸವಾಯಿತೆಂದು ಭಾವ. ಹೀಗೆ ಸಂತೋಷಗೊಂಡ ಕಾವ್ಯನಾಯಕರಾದ ಶ್ರೀಮಧ್ವರು ಇವರನ್ನು ತಮ್ಮ ಪೀಠದಲ್ಲಿ ಕುಳ್ಳಿರಿಸಿ ಪಟ್ಟಾಭಿಷೇಕ ಮಾಡಿದರು. ಬಳಿಕ ಸರಸ್ವತೀಪದವಿಗೆ ಬರುವ ಭಾರತೀದೇವಿಯರೂ ಇವರನ್ನು ಸಾರಸ್ವತಸಾಮ್ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದರು. ಅಂದರೆ ಶ್ರೀರಾಯರು ಅನೇಕ ಗ್ರಂಥಗಳನ್ನು ರಚಿಸಲು ಆರಂಭಿಸಿದರೆಂದು ಭಾವ.

*ವಾದಾವಲೀಟಿಪ್ಪಣೀ*

**ग्रन्थो वादावली द्रागभजत विदितो दुर्मतारण्यदाहा-**
**दापूर्वार्धप्रतीपक्रमपरिपठितस्वाभिधागोचरत्वम् ।**

तस्य श्रीराघवेन्द्रव्रतिवर भवतो वायुवंशप्रसूते-
रेतर्ह्युद्दीपनं यत्तदुचितमिति मे मानसीवृत्तिरिन्धे ॥ १७ ॥

**ಗ್ರಂಥೋ ವಾದಾವಲೀ ದ್ರಾಗಭಜತ ವಿದಿತೋ ದುರ್ಮತಾರಣ್ಯದಾಹಾದ್**
**ಅಪೂರ್ವಾರ್ಧಪ್ರತೀಪಕ್ರಮಪರಿಪಠಿತಸ್ವಾಭಿಧಾಗೋಚರತ್ವಂ ।**
**ತಸ್ಯ ಶ್ರೀರಾಘವೇಂದ್ರವ್ರತಿವರ ಭವತೋ ವಾಯುವಂಶಪ್ರಸೂತೇ-**
**ರೇತರ್ಹ್ಯುದ್ದೀಪನಂ ಯತ್ತದುಚಿತಮಿತಿ ಮೇ ಮಾನಸೀ ವೃತ್ತಿರಿಂಧೇ ॥17॥**

ಅನ್ವಯಾರ್ಥ :

ವಿದಿತಃ= ಪ್ರಸಿದ್ಧವಾದ, ವಾದಾವಲೀ= ವಾದಾವಲಿ ಎಂಬ, ಗ್ರಂಥಃ= ಗ್ರಂಥವು, ದ್ರಾಕ್= ಕೂಡಲೇ, ದುರ್ಮತಾರಣ್ಯದಾಹಾತ್ - ದುರ್ಮತ= ದುರ್ಮತವೆಂಬ, ಅರಣ್ಯ= ಕಾಡನ್ನು, ದಾಹಾತ್= ಸುಡುವಿಕೆಯಿಂದ, ಅಪೂರ್ವಾರ್ಧಪ್ರತೀಪ-ಕ್ರಮಪರಿಪಠಿತಸ್ವಾಭಿಧಾಗೋಚರತ್ವಂ - ಅಪೂರ್ವಾರ್ಧ= ಪೂರ್ವಾರ್ಧದವರೆಗೆ, ಪ್ರತೀಪಕ್ರಮ= ವಿಪರೀತಕ್ರಮದಿಂದ, ಪರಿಪಠಿತ= ಹೇಳಲ್ಪಟ್ಟ, ಸ್ವಾಭಿಧಾ= ತನ್ನ ನಾಮದ, (ಕಾಳ್ಗಿಚ್ಚು ಎಂಬ ಅರ್ಥವನ್ನು ಕೊಡುವ ದಾವಾವಲಿ ಎಂಬ ಹೆಸರಿನ) ಗೋಚರತ್ವಂ= ವಿಷಯತ್ವವನ್ನು, ಅಭಜತ= ಪಡೆಯಿತು. ಶ್ರೀರಾಘವೇಂದ್ರ-ವ್ರತಿವರ!= ಶ್ರೀರಾಘವೇಂದ್ರಯತಿಶ್ರೇಷ್ಠರೇ!, ವಾಯುವಂಶಪ್ರಸೂತೇಃ= ಗಾಳಿಯ ವಂಶದಲ್ಲಿ (ಮಧ್ವರ ಪರಂಪರೆಯಲ್ಲಿ) ಜನ್ಮವೆತ್ತಿದ, ಭವತಃ= ನಿಮ್ಮ ದೆಸೆಯಿಂದ, ಏತರ್ಹಿ= ಈಗ, ತಸ್ಯ,= ಆ ವಾದಾವಲಿಯ (ದಾವಾವಲಿಯ) ಯತ್ ಉದ್ದೀಪನಂ= ಯಾವ ಪ್ರಕಟಪಡಿಸುವಿಕೆಯುಂಟಾಯಿತೋ, (ಯಾವ ಉರಿಸುವಿಕೆಯುಂಟಾಯಿತೋ) ತತ್= ಅದು, ಉಚಿತಂ= ಯೋಗ್ಯವೇ ಆಗಿದೆ, ಇತಿ= ಎಂದು, ಮೇ= ನನ್ನ, ಮಾನಸೀ ವೃತ್ತಿಃ= ಮಾನಸಜ್ಞಾನವು, ಇಂಧೇ= ಜ್ವಲಿಸುತ್ತದೆ.

ಭಾವಾರ್ಥ :

ಶ್ರೀಮಟ್ಟೀಕಾಕೃತ್ಪಾದರು ರಚಿಸಿದ 'ವಾದಾವಲೀ' ಎಂಬ ಗ್ರಂಥವು ದುರ್ಮತವೆಂಬ ಅರಣ್ಯವನ್ನು ಸುಟ್ಟಿರುವುದರಿಂದ ಆ ಗ್ರಂಥದ ಹೆಸರಿನಲ್ಲಿ 'ವಾದಾ' ಎಂಬ ಪೂರ್ವಾರ್ಧವನ್ನು ವಿಪರೀತವಾಗಿ ಅಂದರೆ 'ದಾವಾ' ಎಂದು ಪಠಿಸಿದರೆ ಯಾವ 'ದಾವಾವಲೀ' (ಕಾಳ್ಗಿಚ್ಚು) ಎಂಬ ಹೆಸರು ಬರುತ್ತದೆಯೋ ಆ ಹಸರೇ ಅದಕ್ಕೆ ಯೋಗ್ಯವಾಗಿದೆ. ಶ್ರೀರಾಘವೇಂದ್ರಯತಿವರೇಣ್ಯರೇ! ನೀವಾದರೂ ಈವಾಗ ಆ ಗ್ರಂಥಕ್ಕೆ 'ಭಾವದೀಪಿಕಾ' ಟಿಪ್ಪಣಿಯನ್ನು ರಚಿಸಿ ವಿಶೇಷ ಅರ್ಥವನ್ನು ಪ್ರಕಟಪಡಿಸಿದ್ದರಿಂದ ನಿಮ್ಮ ಟಿಪ್ಪಣಿಯು ವಾದಾವಲಿಯಿಂದ ನಡೆಯುವ ದುರ್ಮತಾರಣ್ಯದಹನಕ್ಕೆ ಸಹಕಾರಿಯಾಗಿದೆ. ನೀವು ವಾಯುವಂಶದವರಾದ್ದರಿಂದ ನೀವು ಮಾಡಿದ ಈ ಕಾರ್ಯವು ಅತ್ಯಂತ ಉಚಿತವಾಗಿದೆ. ಏಕೆಂದರೆ 'ವಾಯು' ಎಂದರೆ ಮಧ್ವರು. ಮಧ್ವರ ಪರಂಪರೆಯಲ್ಲಿ ಬಂದವರು ಪ್ರಾಚೀನ ಗ್ರಂಥಗಳಿಗೆ ವ್ಯಾಖ್ಯಾನ ರಚಿಸಿ ದುರ್ಮತನಿರಾಸಕ್ಕೆ ಸಹಕರಿಸಿದ್ದು ಯುಕ್ತವೇ ಮತ್ತು ವಾಯು ಎಂದರೆ ಗಾಳಿ. ಅರಣ್ಯವನ್ನು ದಹಿಸುವ ದಾವಾಲಿಗೆ (ಕಾಳ್ಗಿಚ್ಚಿಗೆ) ಸಹಕರಿಸಬೇಕಾದದ್ದು ಗಾಳಿಯ ಧರ್ಮವಷ್ಟೇ!

'ಪ್ರಕಾಶ'

वन्दारुप्राणिचेत:श्रिततिमिरपरीभावकौशल्यभाज-
स्तेजस्ते राघवेन्द्र व्रतिवर किमिति श्रीमतो वर्णयाम: ।
येनैषा चन्द्रिकापि त्रिभुवनविशदा सप्तथोदञ्चितश्री-
र्लेभे सर्वज्ञमौलिप्रकटितविभवा त्वत्त एव प्रकाशम् ॥ १८ ॥

ವಂದಾರುಪ್ರಾಣಿಚೇತಶ್ರಿತತಿಮಿರಪರೀಭಾವಕೌಶಲ್ಯಭಾಜಃ
ತೇಜಸ್ತೇ ರಾಘವೇಂದ್ರವ್ರತಿವರಕಿಮಿತಿ ಶ್ರೀಮತೋ ವರ್ಣಯಾಮಃ ।

**ಯೇನೈಷಾ ಚಂದ್ರಿಕಾಪಿ ತ್ರಿಭುವನವಿಶದಾ ಸತ್ಪಥೋದಂಚಿತಶ್ರೀಃ**
**ಲೇಭೇ ಸರ್ವಜ್ಞ ಮೌಲಿಪ್ರಕಟಿತವಿಭವಾ ತ್ವತ್ತ ಏವ ಪ್ರಕಾಶಂ ॥ 18 ॥**

ಅನ್ವಯಾರ್ಥ :

ಯೇನ= ಯಾವ ಕಾರಣದಿಂದ, ತ್ರಿಭುವನವಿಶದಾ= ಮೂರುಲೋಕದಲ್ಲಿ ಪ್ರಖ್ಯಾತವಾದ, ಸತ್ಪಥೋದಂಚಿತಶ್ರೀಃ - ಸತ್ಪಥ= ಜ್ಞಾನಿಗಳ ಮಾರ್ಗದಲ್ಲಿ, ಉದಂಚಿತ= ಪೂಜಿತವಾದ, ಶ್ರೀಃ= ಪ್ರಭಾವವುಳ್ಳ, (ಸತ್ಪಥ= ನಕ್ಷತ್ರಮಾರ್ಗದಲ್ಲಿ, ಉದಂಚಿತ= ಉಂಟಾದ, ಶ್ರೀಃ= ಶೋಭೆಯುಳ್ಳ) ಸರ್ವಜ್ಞಮೌಲಿಪ್ರಕಟಿತ-ವಿಭವಾ- ಸರ್ವಜ್ಞ= ಎಲ್ಲವನ್ನು ಬಲ್ಲವರಾದ ವಿಜಯೀಂದ್ರರೇ ಮೊದಲಾದ-ವರಲ್ಲಿ, ಮೌಲಿ= ಶ್ರೇಷ್ಠರಾದ ಶ್ರೀ ವ್ಯಾಸರಾಜರಿಂದ, ಪ್ರಕಟಿತವಿಭವಾ= ಪ್ರಕಟಿಸಲ್ಪಟ್ಟ ವೈಭವವುಳ್ಳ (ಸರ್ವಜ್ಞ= ರುದ್ರದೇವರ, ಮೌಲಿ= ತಲೆಯಿಂದ, ಪ್ರಕಟಿತವಿಭವಾ= ಪ್ರಕಟಗೊಳಿಸಲ್ಪಟ್ಟ ವೈಭವವುಳ್ಳ) ಏಷಾ ಚಂದ್ರಿಕಾಪಿ= ಈ ತಾತ್ಪರ್ಯಚಂದ್ರಿಕಾಗ್ರಂಥವೂ ಕೂಡ, (ಬೆಳದಿಂಗಳೂ ಕೂಡ) ತ್ವತ್ತ ಏವ= ನಿಮ್ಮಿಂದಲೇ, ಪ್ರಕಾಶಂ= 'ಪ್ರಕಾಶ' ಎಂಬ ಟಿಪ್ಪಣಿಯನ್ನು (ಬೆಳಕನ್ನು) ಲೇಭೇ= ಪಡೆಯಿತೋ, ತೇನ= ಆ ಕಾರಣದಿಂದ ರಾಘವೇಂದ್ರವ್ರತಿವರ!= ಶ್ರೀರಾಘವೇಂದ್ರಯತಿಶ್ರೇಷ್ಠರೇ!, ವಂದಾರುಪ್ರಾಣಿಚೇತಃಶ್ರಿತತಿಮಿರಪರೀಭಾವ-ಕೌಶಲ್ಯಭಾಜಃ - ವಂದಾರು= ನಮಸ್ಕರಿಸುವ, ಪ್ರಾಣಿ= ಚೇತನರ, ಚೇತಃ= ಮನಸ್ಸನ್ನು, ಶ್ರಿತ= ಆಶ್ರಯಿಸಿದ, ತಿಮಿರ= ಅಜ್ಞಾನಾಂಧಕಾರದ, ಪರೀಭಾವ= ನಿರಾಕರಣೆಯಲ್ಲಿ, ಕೌಶಲ್ಯ= ನಿಪುಣತೆಯನ್ನು, ಭಾಜಃ= ಪಡೆದಿರುವ, ಶ್ರೀಮತಃ= ಕಾಂತಿಯುಕ್ತರಾದ, ತೇ= ನಿಮ್ಮ, ತೇಜಃ= ತೇಜಸ್ಸನ್ನು, ಕಿಮಿತಿ= ಏನೆಂದು, ವರ್ಣಯಾಮಃ= ವರ್ಣಿಸೋಣ ?

ಭಾವಾರ್ಥ :

ಶ್ರೀವಿಜಯೀಂದ್ರತೀರ್ಥರೇ ಮೊದಲಾದವರಿಗೆ ಗುರುಗಳಾದ ಶ್ರೀವ್ಯಾಸರಾಜರು ತಾತ್ಪರ್ಯಚಂದ್ರಿಕಾ ಎಂಬ ಗ್ರಂಥವನ್ನು ಬರೆದಿದ್ದಾರೆ. ಅದಕ್ಕೆ ಗುರುಸಾರ್ವಭೌಮರು 'ಪ್ರಕಾಶ' ಎಂಬ ಟಿಪ್ಪಣಿಯನ್ನು ಬರೆದು ಅದರ ಅರ್ಥವು ಜನಸಾಮಾನ್ಯರಿಗೆ ಪ್ರಕಟವಾಗುವಂತೆ ಮಾಡಿದ್ದಾರೆ. ಇದನ್ನು ಕವಿಗಳು ಚಮತ್ಕಾರವಾಗಿ ಹೀಗೆ ವರ್ಣಿಸಿದ್ದಾರೆ. - ಚಂದ್ರಿಕೆ ಎಂದರೆ ಬೆಳದಿಂಗಳು. ಪ್ರಕಾಶ ಎಂದರೆ ಬೆಳಕು ಎಂದು ಮತ್ತೊಂದು ಅರ್ಥ. ಆದ್ದರಿಂದ ಬೆಳದಿಂಗಳೂ ಕೂಡ ಮತ್ತೊಬ್ಬರಿಂದ ಬೆಳಕನ್ನು ಪಡೆದರೆ ಆ ಬೆಳಕನ್ನು ಕೊಟ್ಟವರಿಗೆ ಎಷ್ಟು ಮಹತ್ತ್ವವೋ ಅದರಂತೆ 'ಚಂದ್ರಿಕಾ' ಎಂಬ ಗ್ರಂಥಕ್ಕೆ 'ಪ್ರಕಾಶ'ವನ್ನು ರಚಿಸಿದ ರಾಯರ ಮಹಿಮೆ ಅದ್ಭುತವಾದುದು. ಆಶ್ರಿತಜನರ ಅಜ್ಞಾನಾಂಧಕಾರವನ್ನು ಪರಿಹರಿಸುವ ಗುರುಗಳ ಜ್ಞಾನದ ತೇಜಸ್ಸಿನ ಮಹಿಮೆಯನ್ನು ಏನೆಂದು ವರ್ಣಿಸಲಿ ಎಂದು ಕವಿಗಳು ಬೆರಗಾಗಿದ್ದಾರೆ.

### ಪರಿಮಳದ ಮಹಿಮೆ

**धीर श्रीराघवेन्द्र त्वदतुलरसनारङ्गनृत्यत्स्वयंभू-**
**योषाधम्मिल्लभारश्लथकुसुमततीस्त्वद्गिरः सङ्गिरामः ।**
**याभिः संमिश्रिताभिर्निरवधि वसुधाविश्रुता सा सुधाऽपि**
**क्षोणीगीर्वाणगम्यं परिमलमतुलं साम्प्रतं सम्प्रपेदे ॥ १९ ॥**

**ಧೀರ ಶ್ರೀ ರಾಘವೇಂದ್ರ ತ್ವದತುಲರಸನಾರಂಗನೃತ್ಯತ್ಸ್ವಯಂಭೂ**
**ಯೋಷಾಧಮ್ಮಿಲ್ಲಭಾರಶ್ಲಥಕುಸುಮತತೀಸ್ತ್ವದ್ಗಿರಃ ಸಂಗಿರಾಮಃ ।**
**ಯಾಭಿಃ ಸಂಮಿಶ್ರಿತಾಭಿರ್ನಿರವಧಿ ವಸುಧಾ ವಿಶ್ರುತಾ ಸಾ ಸುಧಾಪಿ**
**ಕ್ಷೋಣೀಗೀರ್ವಾಣಗಮ್ಯಂ ಪರಿಮಲಮತುಲಂ ಸಾಂಪ್ರತಂ ಸಂಪ್ರಪೇದೇ ॥**

ಅನ್ವಯಾರ್ಥ :

ಧೀರಶ್ರೀರಾಘವೇಂದ್ರ!= ಜ್ಞಾನಿಗಳಾದ ಶ್ರೀರಾಘವೇಂದ್ರಗುರುಗಳೇ!, ಸಂಮಿಶ್ರಿತಾಭಿಃ= ಒಟ್ಟುಗೂಡಿಸಲ್ಪಟ್ಟ, ಯಾಭಿಃ= ಯಾವ ವಚನಗಳಿಂದ, ವಸುಧಾವಿಶ್ರುತಾ= ಭೂಮಿಯಲ್ಲಿ ವಿಖ್ಯಾತವಾದ, ಸಾ ಸುಧಾಪಿ= ಶ್ರೀಮಜ್ಜಯತೀರ್ಥರಿಂದ ರಚಿತವಾದ ನ್ಯಾಯಸುಧೆಯೂ ಕೂಡ, ಸಾಂಪ್ರತಂ= ಈಗ, ಕ್ಷೋಣೀಗೀರ್ವಾಣಗಮ್ಯಂ - ಕ್ಷೋಣೀಗೀರ್ವಾಣ= ಭೂಸುರರಿಂದ, ಗಮ್ಯಂ= ಲಭ್ಯವಾದ, ನಿರವಧಿ= ನಿಸ್ಸೀಮವಾದ, ಅತುಲಂ= ಅನುಪಮವಾದ, ಪರಿಮಲಂ= ಪರಿಮಳವನ್ನು, ಪ್ರಪೇದೇ= ಹೊಂದಿತೋ, ಅಂತಹ, ತ್ವದ್ಗಿರಃ= ನಿಮ್ಮ ವಚನಗಳನ್ನು, ತ್ವದತುಲರಸನಾರಂಗನೃತ್ಯತ್ಸ್ವಯಂಭೂಯೋಷಾ-ಧಮ್ಮಿಲ್ಲಭಾರಶ್ಲಥಕುಸುಮತತೀಃ - ತ್ವತ್= ನಿಮ್ಮ, ಅತುಲ= ಅನುಪಮವಾದ, ರಸನಾ= ನಾಲಿಗೆ ಎಂಬ, ರಂಗ= ರಂಗಸ್ಥಳದಲ್ಲಿ, ನೃತ್ಯತ್= ನರ್ತಿಸುವ, ಸ್ವಯಂ-ಭೂಯೋಷಾ= ಬ್ರಹ್ಮದೇವರ ಪತ್ನಿಯಾದ ಸರಸ್ವತೀದೇವಿಯ, ಧಮ್ಮಿಲ್ಲಭಾರ= ಮುಡಿಯಿಂದ, ಶ್ಲಥ= ಉದುರಿದ, ಕುಸುಮ= ಹೂಗಳ, ತತೀಃ= ಸಮೂಹ-ಗಳನ್ನಾಗಿ, ಸಂಗಿರಾಮಃ= ಹೇಳುತ್ತೇವೆ.

ಭಾವಾರ್ಥ :

ಶ್ರೀರಾಘವೇಂದ್ರಸ್ವಾಮಿಗಳವರ ನಾಲಿಗೆ ಎಂಬ ರಂಗಸ್ಥಳದಲ್ಲಿ ಮುಡಿಯಲ್ಲಿ ಹೂಮುಡಿದ ಸರಸ್ವತೀದೇವಿಯರು ನರ್ತಿಸಿದಾಗ ಹೂಗಳು ಬಿಡಿಬಿಡಿಯಾಗಿ ಉದುರಿದವಂತೆ. ಅವುಗಳನ್ನೆಲ್ಲ ಪುನಃ ಒಟ್ಟುಗೂಡಿಸಿದಾಗ ಉಂಟಾದ ಪರಿಮಳವೇ ಶ್ರೀಜಯತೀರ್ಥರ ನ್ಯಾಯಸುಧೆಗೆ ಗುರುಗಳು ರಚಿಸಿದ ಪರಿಮಳ ಎಂಬ ವ್ಯಾಖ್ಯಾನವಾಗಿದೆ. ಗುರುಸಾರ್ವಭೌಮರು ಶ್ರೀಮನ್ನ್ಯಾಯಸುಧೆಯನ್ನು ಪ್ರವಚನ ಮಾಡುವಾಗ ಇವರ ಮುಖದಿಂದ ಬಂದ ಬಿಡಿನುಡಿಗಳ ಸಂಕಲನವೇ `ಪರಿಮಳ'ವಾಯಿತೆಂದು ಇತಿಹಾಸ.

ಸುಧೆಯೆಂದರೆ ಮತ್ತೊಂದರ್ಥದಲ್ಲಿ ಅಮೃತ. ಅಮೃತದ ಪರಿಮಳವು ಸ್ವರ್ಗದ ಸುರರಿಗೆ ಮಾತ್ರ ಮೀಸಲು. ನ್ಯಾಯಸುಧೆಯೂ ಅಮೃತವೇ. ಶ್ರೀರಾಘವೇಂದ್ರರ ಕೃಪೆಯಿಂದ ಅದರ ಪರಿಮಳವು ಭೂಲೋಕದ ಸುರರಿಗೂ ಲಭ್ಯವಾಯಿತು.

### ತತ್ತ್ವಪ್ರಕಾಶಿಕಾಭಾವದೀಪ

**प्रायः प्रागन्यदीयातनुतरविवृतिग्रन्थवासोविहीना**
**ह्रीणानादर्शि धीरैरपि किल युवतिर्भाष्यटीकाभिधाना ।**
**अद्य श्रीराघवेन्द्रव्रतिकृतविवृतिप्रौढकौशेयरत्नं**
**स्वेहायुक्तं वसाना विहरति सुधियामग्रतः स्वैरिणीव ॥ २० ॥**

**ಪ್ರಾಯಃ ಪ್ರಾಗನ್ಯದೀಯಾತನುತರವಿವೃತಿಗ್ರಂಥವಾಸೋ ವಿಹೀನಾ**
**ಹ್ರೀಣಾ ನಾದರ್ಶಿ ಧೀರೈರಪಿ ಕಿಲ ಯುವತಿರ್ಭಾಷ್ಯಟೀಕಾಭಿಧಾನಾ ।**
**ಅದ್ಯ ಶ್ರೀರಾಘವೇಂದ್ರವ್ರತಿಕೃತವಿವೃತಿಪ್ರೌಢಕೌಶೇಯರತ್ನಂ**
**ಸ್ವೇಹಾಯುಕ್ತಂ ವಸಾನಾ ವಿಹರತಿ ಸುಧಿಯಾಮಗ್ರತಃ ಸ್ವೈರಿಣೀವ ॥ 20 ॥**

ಅನ್ವಯಾರ್ಥ :

ಭಾಷ್ಯಟೀಕಾಭಿಧಾನಾ= ತತ್ತ್ವಪ್ರಕಾಶಿಕಾ ಎಂಬ, ಯುವತಿಃ= ತರುಣಿಯು, ಪ್ರಾಕ್= ಮೊದಲು, ಅನ್ಯದೀಯಾತನುತರವಿವೃತಿಗ್ರಂಥವಾಸೋವಿಹೀನಾ - ಅನ್ಯದೀಯ= ಅನ್ಯರಿಂದ ರಚಿಸಲ್ಪಟ್ಟ, ಅತನುತರ= ದೀರ್ಘವಾದ, ಗ್ರಂಥ= ಗ್ರಂಥವೆಂಬ, ವಾಸಃ= ವಸ್ತ್ರದಿಂದ, ವಿಹೀನಾ= ರಹಿತಳಾಗಿ, ಹ್ರೀಣಾ= ಲಜ್ಜಿತಳಾಗಿ, ಧೀರೈರಪಿ= ಜ್ಞಾನಿಗಳಿಂದಲೂ ಕೂಡ, ನ ಅದರ್ಶಿ ಕಿಲ= ನೋಡಲ್ಪಡಲಿಲ್ಲ. ಅದ್ಯ= ಇಂದು, ಸ್ವೇಹಾಯುಕ್ತಂ - ಸ್ವ= ತನ್ನ, ಈಹಾ= ಇಚ್ಛೆಗೆ, ಯುಕ್ತಂ= ಅನುಕೂಲ-

ವಾದ, ಶ್ರೀರಾಘವೇಂದ್ರವ್ರತಿಕೃತವಿವೃತಿಪ್ರೌಢಕೌಶೇಯರತ್ನಂ - ಶ್ರೀರಾಘವೇಂದ್ರವ್ರತಿ= ಶ್ರೀರಾಘವೇಂದ್ರಯತಿಗಳಿಂದ, ಕೃತ= ಮಾಡಲ್ಪಟ್ಟ, ವಿವೃತಿ= ವ್ಯಾಖ್ಯಾನವೆಂಬ, ಪ್ರೌಢ= ಪ್ರೌಢವಾದ ಅಥವಾ ದೀರ್ಘವಾದ, ಕೌಶೇಯರತ್ನಂ= ಶ್ರೇಷ್ಠವಾದ ರೇಶಿಮೆ ವಸ್ತ್ರವನ್ನು, ವಸಾನಾ= ಉಟ್ಟವಳಾಗಿ, ಸುಧಿಯಾಂ= ಜ್ಞಾನಿಗಳ, ಅಗ್ರತಃ= ಮುಂಭಾಗದಲ್ಲಿ, ಸ್ವೈರಿಣೀ ಇವ= ಸ್ವಚ್ಛಂದಚಾರಿಣಿಯಂತೆ, ವಿಹರತಿ= ವಿಹರಿಸುತ್ತಾಳೆ.

ಭಾವಾರ್ಥ :

ಶ್ರೀಮಜ್ಜಯತೀರ್ಥರ 'ತತ್ತ್ವಪ್ರಕಾಶಿಕಾ' ಎಂಬ ಯುವತಿಯು ದೀರ್ಘವಾದ ಟಿಪ್ಪಣಿ ಎಂಬ ವಸ್ತ್ರ(ಸೀರೆ) ಇಲ್ಲದೆ ಲಜ್ಜೆಯಿಂದಾಗಿ ಜ್ಞಾನಿಗಳ ಮುಂದೆ ಪ್ರಕಟವಾಗಿದ್ದಿಲ್ಲ. ಇಂದು ಶ್ರೀರಾಘವೇಂದ್ರ ಗುರುಗಳು ಅರ್ಪಿಸಿದ ಟಿಪ್ಪಣಿ ಎಂಬ ಸುದೀರ್ಘವಾದ ಪಿತಾಂಬರವನ್ನುಟ್ಟು ಜ್ಞಾನಿಗಳ ಮುಂದೆ ಸ್ವೈರಿಣಿಯಂತೆ ವಿಹರಿಸುತ್ತಾಳೆ. ಅಂದರೆ ಶ್ರೀಗುರುಗಳ ಭಾವದೀಪದಿಂದ ತತ್ತ್ವಪ್ರಕಾಶಿಕಾ ಎಲ್ಲರಿಗೂ ಸುಗಮವಾಗಿದೆ ಎಂದು ಅಭಿಪ್ರಾಯ.

ನ್ಯಾಯಮುಕ್ತಾವಲಿ.

ग्रन्थोऽयं न्यायमुक्तावलिरिति भवता राघवेन्द्र प्रणीतो
नूनं मुक्तावलिर्यत्प्रथममुपचितादुद्धृतस्तन्त्रसिन्धोः ।
प्रोतश्च ध्यानतन्तौ तदनु तव गुणप्रौढिमाशंसतां नः
कण्ठेषु प्रेमभूम्ना बहुमतिविधये वाधुना सन्न्यधायि ॥ २१ ॥

ಗ್ರಂಥೋಽಯಂ ನ್ಯಾಯಮುಕ್ತಾವಲಿರಿತಿ ಭವತಾ ರಾಘವೇಂದ್ರ ಪ್ರಣೀತೋ
ನೂನಂ ಮುಕ್ತಾವಲಿರ್ಯತ್ಪ್ರಥಮಮುಪಚಿತಾದುದ್ಧೃತಸ್ತಂತ್ರಸಿಂಧೋಃ ।

**ಪ್ರೋತಶ್ಚ ಧ್ಯಾನತಂತೌ ತದನು ತವ ಗುಣಪ್ರೌಢಿಮಾಶಂಸತಾಂ ನಃ**
**ಕಂಠೇಷು ಪ್ರೇಮಭೂಮ್ನಾ ಬಹುಮತಿವಿಧಯೇವಾಧುನಾ ಸಂನ್ಯಧಾಯಿ ॥**

ಅನ್ವಯಾರ್ಥ :

ರಾಘವೇಂದ್ರ!= ಗುರುಸಾರ್ವಭೌಮರೇ!, ಭವತಾ= ನಿಮ್ಮಿಂದ, ಪ್ರಣೀತಃ= ರಚಿಸಲ್ಪಟ್ಟ, ನ್ಯಾಯಮುಕ್ತಾವಲಿಃ ಇತಿ= ನ್ಯಾಯಮುಕ್ತಾವಲಿ ಎಂಬ (ನ್ಯಾಯ- ಗಳೆಂಬ ಮುತ್ತುಗಳ ರಾಶಿಯು) ಅಯಂ ಗ್ರಂಥಃ= ಈ ಗ್ರಂಥವು, ಯತ್= ಯಾವಕಾರಣದಿಂದ, ಪ್ರಥಮಂ= ಮೊದಲು, ಉಪಚಿತಾತ್= ಸಮೃದ್ಧವಾದ, ತಂತ್ರಸಿಂಧೋಃ= ಬ್ರಹ್ಮಸೂತ್ರವೆಂಬ ಸಮುದ್ರದಿಂದ, ಉದ್ಧೃತಃ= ಎತ್ತಲ್ಪಟ್ಟಿತೋ, ತದನು= ಬಳಿಕ, ಧ್ಯಾನತಂತೌ= ಚಿಂತನವೆಂಬ ನೂಲಿನಲ್ಲಿ, ಪ್ರೋತಶ್ಚ= ಪೋಣಿಸಲ್ಪಟ್ಟಿತೋ ಅಧುನಾ= ಈಗ, ತವ= ನಿಮ್ಮ, ಗುಣಪ್ರೌಢಿಂ= ಗುಣ- ಸಮೃದ್ಧಿಯನ್ನು, ಆಶಂಸತಾಂ= ಸ್ತುತಿಸುವ, ನಃ= ನಮ್ಮ, ಕಂಠೇಷು= ಕಂಠಗಳಲ್ಲಿ, ಪ್ರೇಮಭೂಮ್ನಾ= ಅತಿಶಯವಾದ ಪ್ರೇಮದಿಂದ, ಬಹುಮತಿವಿಧಯೇ ವಾ= ಬಹುಮಾನ ಮಾಡಲೋಸುಗವೋ ಎಂಬಂತೆ, ಸಂನ್ಯಧಾಯಿ= ಹಾಕಲ್ಪಟ್ಟಿತೋ, ತತ್= ಆದ್ದರಿಂದ, ನೂನಂ= ನಿಶ್ಚಯವಾಗಿಯೂ, ಮುಕ್ತಾವಲಿಃ= ಮುತ್ತಿನಹಾರವೇ ಸರಿ.

ಭಾವಾರ್ಥ :

ವ್ಯಾಸಪ್ರಣೀತ ಬ್ರಹ್ಮಸೂತ್ರಗಳ ಮೇಲೆ ಶ್ರೀರಾಘವೇಂದ್ರರು 'ನ್ಯಾಯಮುಕ್ತಾವಲಿ' ಎಂಬ ಗ್ರಂಥವನ್ನು ರಚಿಸಿದ್ದಾರೆ. ಅದು ನಿಶ್ಚಯವಾಗಿ ಮುತ್ತಿನಹಾರವೇ ಆಗಿದೆ. ಏಕೆಂದರೆ ಸಮುದ್ರದಿಂದ ಮುತ್ತುಗಳನ್ನು ಆರಿಸಿ ನೂಲಿನಲ್ಲಿ ಪೋಣಿಸಿ ಹಾರವನ್ನು ಮಾಡಿ ಬಳಿಕ ಬಹುಮಾನ ಮಾಡಲು ಪ್ರೀತ್ಯಾಸ್ಪದರ ಕಂಠದಲ್ಲಿ ಹಾಕುವಂತೆ. ಶ್ರೀಗುರುರಾಜರು

ಬ್ರಹ್ಮಸೂತ್ರಗಳಿಂದ ನ್ಯಾಯಗಳನ್ನು ಆರಿಸಿ ತಮ್ಮ ಚಿಂತನದಿಂದ ಅವುಗಳನ್ನು ಜೋಡಿಸಿ ಗ್ರಂಥವನ್ನು ರಚಿಸಿ ಶಿಷ್ಯರು ಅದನ್ನು ಕಂಠಪಾಠ ಮಾಡಿ ಕಂಠದಲ್ಲಿ ಧರಿಸುವಂತೆ ಮಾಡಿದ್ದಾರೆ.

ತತ್ತ್ವಮಂಜರೀ

**हन्तानन्तोऽणुभाष्ये विलसति भगवत्पादसंवर्णितोऽर्थः**
**सत्यं प्रत्येतु लोकः कथमिदमधुना तस्य टीकां विना ते ।**
**धीर श्रीराघवेन्द्र व्रतिवर निवसद्विश्वमास्यान्तराले**
**स्तोके तोकस्य शौरेरतिभृशकुपितां तत्प्रसूमन्तरेव ॥ २२ ॥**

**ಹಂತಾನಂತೋಽಣುಭಾಷ್ಯೇ ವಿಲಸತಿ ಭಗವತ್ಪಾದಸಂವರ್ಣಿತೋಽರ್ಥಃ**
**ಸತ್ಯಂ ಪ್ರತ್ಯೇತು ಲೋಕಃ ಕಥಮಿದಮಧುನಾ ತಸ್ಯ ಟೀಕಾಂ ವಿನಾ ತೇ ।**
**ಧೀರ ಶ್ರೀರಾಘವೇಂದ್ರ ವ್ರತಿವರ ನಿವಸದ್ವಿಶ್ವಮಾಸ್ಯಾಂತರಾಲೇ**
**ಸ್ತೋಕೇ ತೋಕಸ್ಯ ಶೌರೇರತಿಭೃಶಕುಪಿತಾಂ ತತ್ಪ್ರಸೂಮಂತರೇವ ॥ 22 ॥**

ಅನ್ವಯಾರ್ಥ :

ಅಣುಭಾಷ್ಯೇ= ಅಣುಭಾಷ್ಯ ಎಂಬ ಕಿರಿದಾದ ಗ್ರಂಥದಲ್ಲಿ, ಭಗವತ್ಪಾದ-ಸಂವರ್ಣಿತಃ= ಶ್ರೀಮದಾಚಾರ್ಯರಿಂದ ವರ್ಣಿಸಲ್ಪಟ್ಟ, ಅನಂತಃ ಅರ್ಥಃ= ಅನಂತವಾದ ಅರ್ಥವು, ವಿಲಸತಿ= ಶೋಭಿಸುತ್ತದೆ. ಹಂತ= ನಿಶ್ಚಯವು. ತು= ಆದರೆ, ಧೀರಶ್ರೀರಾಘವೇಂದ್ರವರ!= ಜ್ಞಾನಿಗಳಾದ ರಾಘವೇಂದ್ರ ಗುರುಗಳೇ!, ತೋಕಸ್ಯ= ಶಿಶುವಾದ, ಶೌರೇಃ= ಶ್ರೀಕೃಷ್ಣನ, ಸ್ತೋಕೇ= ಅಲ್ಪವಾದ, ಆಸ್ಯಾಂತ-ರಾಲೇ= ವದನಾಂತರಂಗದಲ್ಲಿ, ನಿವಸತ್= ನೆಲೆಸಿದ, ವಿಶ್ವಂ= ಪ್ರಪಂಚವನ್ನು, ಸತ್ಯಂ= ಸತ್ಯವನ್ನಾಗಿ, ಅತಿಭೃಶಕುಪಿತಾಂ - ಅತಿಭೃಶ= ಬಹಳವಾಗಿ, ಕುಪಿತಾಂ=

ಕೋಪಗೊಂಡ, ತತ್ಪಸೂಂ= ಅವನ ತಾಯಿಯಾದ ಯಶೋದೆಯನ್ನು, ಅಂತರಾ ಇವ= ಹೊರತುಪಡಿಸಿ ಹೇಗೋ ಹಾಗೆ, ತಸ್ಯ= ಆ ಅಣುಭಾಷ್ಯಕ್ಕೆ, ತೇ ಟೀಕಾಂ ವಿನಾ= ನಿಮ್ಮ ಟೀಕೆ ಇಲ್ಲದೇ, ಇದಂ= ಅಣುಭಾಷ್ಯದಲ್ಲಿ ಅನಂತಾರ್ಥ ಇರುವುದನ್ನು ಸತ್ಯಂ= ಸತ್ಯವನ್ನಾಗಿ, ಲೋಕಃ= ಲೋಕವು, ಕಥಂ ಪ್ರತ್ಯೇತು= ಹೇಗೆ ನಂಬೀತು?

ಭಾವಾರ್ಥ :

ಬಾಲಕೃಷ್ಣನ ವದನದಲ್ಲಿ ಬ್ರಹ್ಮಾಂಡ ಅಡಗಿರುವುದನ್ನು ಅವನು ಮಣ್ಣು ತಿಂದಾಗ ಕೋಪಗೊಂಡು ಬಾಯಿ ತೆಗೆಸಿದ ಯಶೋದೆಯ ಮೂಲಕವೇ ನಂಬುವಂತಾಯಿತಷ್ಟೇ. ಅದರಂತೆ ಶ್ರೀರಾಘವೇಂದ್ರರೇ! ನೀವು ರಚಿಸಿದ ತತ್ತ್ವಮಂಜರೀ ವ್ಯಾಖ್ಯಾನವಿಲ್ಲದೆ ಅಣುಭಾಷ್ಯದಲ್ಲಿ ಅನಂತಾರ್ಥ ಅಡಗಿರುವುದನ್ನು ಜಿಜ್ಞಾಸುಗಳು ಹೇಗೆ ತಾನೆ ನಂಬಿಯಾರು? ನಿಮ್ಮ ಟೀಕೆಯ ಮೂಲಕವೇ ಅದರ ಮಹಿಮೆ ತಿಳಿಯುವುದು.

ತಂತ್ರದೀಪಿಕಾ

भिन्नैरर्थैरनेकप्रकरणभणितैरद्य मध्वागमाब्धौ
मत्या भूयो विचित्य श्रुतिपरिणतया शस्तया सङ्गृहीतैः ।
सूत्रेष्वेकैकशोऽपि व्रतिवर भवता योजितेषु प्रवाचां
मोदो यादृङ् न तादृक् तव पुनरितरै राघवेन्द्र प्रबन्धैः ॥ २३ ॥

ಭಿನ್ನೈರರ್ಥೈರನೇಕಪ್ರಕರಣಭಣಿತೈರದ್ಯ ಮಧ್ವಾಗಮಾಬ್ಧೌ
ಮತ್ಯಾ ಭೂಯೋ ವಿಚಿತ್ಯ ಶ್ರುತಿಪರಿಣತಯಾ ಶಸ್ತಯಾ ಸಂಗೃಹೀತೈಃ ।
ಸೂತ್ರೇಷ್ವೇಕೈಕಶೋಽಪಿ ವ್ರತಿವರ ಭವತಾ ಯೋಜಿತೇಷು ಪ್ರವಾಚಾಂ
ಮೋದೋ ಯಾದೃಙ್ನ ತಾದೃಕ್ ತವ ಪುನರಿತರೈ ರಾಘವೇಂದ್ರ ಪ್ರಬಂಧೈಃ ॥

ಅನ್ವಯಾರ್ಥ :

ವ್ರತಿವರ= ಯತಿಶ್ರೇಷ್ಠರಾದ, ರಾಘವೇಂದ್ರ= ಶ್ರೀರಾಘವೇಂದ್ರ ಗುರುಗಳೇ!, ಭವತಾ= ನಿಮ್ಮಿಂದ, ಶ್ರುತಿಪರಿಣತಯಾ= ಶ್ರುತಿ= ಶ್ರವಣದಿಂದ, ಪರಿಣತಯಾ= ಪರಿಪಕ್ವವಾದ, ಶಸ್ತಯಾ= ಪ್ರಶಸ್ತವಾದ, ಮತ್ಯಾ= ಬುದ್ಧಿಯಿಂದ, ಮಧ್ವಾಗಮಾಬ್ಧೌ= ಮಧ್ವಶಾಸ್ತ್ರವೆಂಬ ಸಮುದ್ರದಲ್ಲಿ, ಭೂಯಃ= ಪುನಃ ಪುನಃ, ವಿಚಿತ್ಯ= ಹುಡುಕಿ, ಸಂಗೃಹೀತ್ಯೈಃ= ಸಂಗ್ರಹಿಸಲ್ಪಟ್ಟ, ಅನೇಕಪ್ರಕರಣಭಣಿತೈಃ= ನಾನಾಪ್ರಕರಣಗಳಲ್ಲಿ ಹೇಳಲ್ಪಟ್ಟ, ಭಿನ್ನೈಃ= ಬೇರೆ ಬೇರೆಯಾದ, ಅರ್ಥೈಃ= ಅರ್ಥ-ಗಳಿಂದ, ಸೂತ್ರೇಷು= ಬ್ರಹ್ಮಸೂತ್ರಗಳು ಏಕೈಕಶಃ= ಒಂದೊಂದಾಗಿ, ಯೋಜಿ-ತೇಷು= ಹೊಂದಿಸಿ ನಿರೂಪಿಸಲ್ಪಡುತ್ತಿರಲು, ಪ್ರವಾಚಾಂ= ಪಂಡಿತರಿಗೆ, ಯಾದೃಕ್= ಎಂತಹ, ಮೋದಃ= ಸಂತೋಷವು ಆಯಿತೋ, ತಾದೃಕ್= ಅಂತಹ ಸಂತೋಷವು, ತವ= ನಿಮ್ಮ, ಇತರೈಃ= ಬೇರೆಯದ್ದಾದ, ಪ್ರಬಂಧೈಃ= ಗ್ರಂಥಗಳಿಂದ, ಪುನಃ= ಮತ್ತೊಮ್ಮೆ, ನ ಅಭೂತ್= ಆಗಲಿಲ್ಲ.

ಭಾವಾರ್ಥ :

ಶ್ರೀಗುರುಸಾರ್ವಭೌಮರು ಶ್ರೀಮಧ್ವಶಾಸ್ತ್ರವನ್ನು ಚೆನ್ನಾಗಿ ಅಧ್ಯಯನ ಮಾಡಿ ಪರಿಪಕ್ವವಾದ ಬುದ್ಧಿಯಿಂದ ಮಧ್ವಶಾಸ್ತ್ರಮಹಾರ್ಣವದಲ್ಲಿ ಬೇರೆ ಬೇರೆ ಸ್ಥಳದಲ್ಲಿರುವ ವಿಷಯಗಳನ್ನು ಸಂಗ್ರಹಿಸಿ ಅವುಗಳನ್ನು ಯಥಾಯೋಗ್ಯವಾಗಿ ಒಂದೊಂದು ಬ್ರಹ್ಮಸೂತ್ರಗಳಲ್ಲಿ ಯೋಜನೆಗೊಳಿಸಿ ಸೂತ್ರಾರ್ಥವನ್ನು ವಿವರಿಸುವ ತಂತ್ರದೀಪಿಕಾ ಎಂಬ ಗ್ರಂಥವನ್ನು ರಚಿಸಿದ್ದಾರೆ. ಇದರಿಂದ ಪಂಡಿತರಿಗುಂಟಾದ ಆನಂದವು ಇತರ ಪ್ರಬಂಧಗಳಿಂದ ಆಗಲಿಲ್ಲ. ಅಂತಹ ಸಂತಸವನ್ನು ತಂತ್ರದೀಪಿಕಾಗ್ರಂಥವು ಉಂಟುಮಾಡಿದೆ.

ತಂತ್ರಸಾರ ಮಂತ್ರೋದ್ಧಾರ

धीर श्रीराघवेन्द्र व्रतिवर सुजनानुग्रहव्यग्रचित्तै-
राचार्यैः सङ्गृहीताः कतिचनमनवः सारभूताः श्रुतिभ्यः ।
तानेवोद्धृत्य भूयः श्रुतिषु निदधता शिष्यवर्गोपक्लृप्त्यै
लोके साधु व्यधायि श्रुतगुण भवताऽचार्यचर्यानुवृत्तिः ।। २४ ।।

**ಧೀರ ಶ್ರೀರಾಘವೇಂದ್ರವ್ರತಿವರ ಸುಜನಾನುಗ್ರಹವ್ಯಗ್ರಚಿತ್ತೈಃ**
**ಆಚಾರ್ಯೈಸ್ಸಂಗೃಹೀತಾಃ ಕತಿಚನ ಮನವಃ ಸಾರಭೂತಾಃ ಶ್ರುತಿಭ್ಯಃ ।**
**ತಾನೇವೋದ್ಧೃತ್ಯ ಭೂಯಃ ಶ್ರುತಿಷು ನಿದಧತಾ ಶಿಷ್ಯವರ್ಗೋಪಕ್ಲೃಪ್ತ್ಯೈ**
**ಲೋಕೇ ಸಾಧು ವ್ಯಧಾಯಿ ಶ್ರುತಗುಣ ಭವತಾಚಾರ್ಯಚರ್ಯಾನು ವೃತ್ತಿಃ॥**

ಅನ್ವಯಾರ್ಥ :

ಸುಜನಾನುಗ್ರಹವ್ಯಗ್ರಚಿತ್ತೈಃ= ಸಜ್ಜನಾನುಗ್ರಹದಲ್ಲಿ ಆಸಕ್ತವಾದ ಮನಸ್ಸುಳ್ಳ, ಆಚಾರ್ಯೈಃ= ಶ್ರೀಮಧ್ವಾಚಾರ್ಯರಿಂದ, ಶ್ರುತಿಭ್ಯಃ= ವೇದಗಳ ದೆಸೆಯಿಂದ, ಸಾರಭೂತಾಃ= ಉತ್ಕೃಷ್ಟವಾದ, ಕತಿಚನ= ಕೆಲವು, ಮನವಃ= ಮಂತ್ರಗಳು, ಸಂಗೃಹೀತಾಃ= ಸಂಗ್ರಹಿಸಲ್ಪಟ್ಟವೆ. ಶ್ರುತಗುಣ= ಪ್ರಖ್ಯಾತಗುಣಗಳುಳ್ಳ, ಧೀರ ಶ್ರೀರಾಘವೇಂದ್ರವ್ರತಿವರ= ಜ್ಞಾನಿಗಳಾದ ಶ್ರೀರಾಘವೇಂದ್ರಯತಿವರೇಣ್ಯರೇ, ತಾನೇವ= ಆ ಮಂತ್ರಗಳನ್ನೇ, ಉದ್ಧೃತ್ಯ= ಎತ್ತಿ, ಶಿಷ್ಯವರ್ಗೋಪಕ್ಲೃಪ್ತ್ಯೈ= ಶಿಷ್ಯಸಮೂಹದ ಉಪಕಾರಕ್ಕಾಗಿ, ಭೂಯಃ= ಪುನಃ, ಲೋಕೇ= ಲೋಕದಲ್ಲಿ, ಶ್ರುತಿಷು ನಿದಧತಾ= ಕಿವಿಗಳಲ್ಲಿ ಹಾಕಿರುವ (ವೇದಗಳಲ್ಲಿ ಹಾಕಿರುವ) ಭವತಾ= ನಿಮ್ಮಿಂದ, ಆಚಾರ್ಯಚರ್ಯಾನುವೃತ್ತಿಃ= ಆಚಾರ್ಯರ ಚರ್ಯೆಯ ಅನುಸರಣವು, ಸಾಧು= ಚೆನ್ನಾಗಿ, ವ್ಯಧಾಯಿ= ಮಾಡಲ್ಪಟ್ಟಿತು.

ಭಾವಾರ್ಥ :

ಶ್ರೀಮದಾಚಾರ್ಯರು ಶ್ರುತಿಗಳಿಂದ ಸಾರಭೂತವಾದ ಮಂತ್ರಗಳನ್ನು ಸಂಗ್ರಹಿಸಿ ತಂತ್ರಸಾರಸಂಗ್ರಹ ಎಂಬ ಪದ್ಯಮಯವಾದ ಗ್ರಂಥ ಒಂದನ್ನು ರಚಿಸಿದ್ದಾರೆ. ಆ ಗ್ರಂಥದಿಂದ ಮಂತ್ರಗಳನ್ನು ಉದ್ಧರಿಸಿ·ಗುರುರಾಜರು ಅವುಗಳನ್ನು ಪುನಃ ಶ್ರುತಿಗಳಲ್ಲಿ ಹಾಕಿದ್ದಾರೆ. ಇದೆಂತಹ ಕಾರ್ಯ! ಆಚಾರ್ಯರ ಚರ್ಯೆಗೆ ವಿರುದ್ಧವಲ್ಲವೇ? ಎಂದು ಮೇಲ್ನೋಟಕ್ಕೆ ಭಾಸವಾಗುವುದು. ಆದರೆ ಇಲ್ಲಿ ಕವಿಗಳು ಶ್ರುತಿ ಎಂಬ ಪದವನ್ನು ದ್ವಂದ್ವಾರ್ಥದಲ್ಲಿ ಬಳಸಿದ್ದಾರೆ. ವೇದ ಎಂದು ಒಂದು ಅರ್ಥವಾದರೆ ಕಿವಿ ಎಂದು ಮತ್ತೊಂದು ಅರ್ಥ. ಆಚಾರ್ಯರು ಶ್ರುತಿ(ವೇದ)ಯಿಂದ ಮಂತ್ರಗಳನ್ನು ಎತ್ತಿ ಸಂಗ್ರಹಿಸಿ ತಂತ್ರಸಾರ ಸಂಗ್ರಹ ಎಂಬ ಗ್ರಂಥ ಒಂದನ್ನು ರಚಿಸಿದರು. ಅದರಲ್ಲಿ ಮಂದಬುದ್ಧಿಯ ಜನರಿಗೆ ವ್ಯಕ್ತವಾಗದ ಮಂತ್ರಗಳನ್ನು ಅಲ್ಲಿಂದ ಉದ್ಧರಿಸಿ ಗುರುರಾಜರು ಶಿಷ್ಯರ ಶ್ರುತಿಗಳಲ್ಲಿಯೇ (ಕಿವಿಗಳಲ್ಲಿಯೇ) ಹಾಕಿದರು. ಆಚಾರ್ಯರು ಮಾಡಿದ ಶಿಷ್ಯೋಪಕಾರವನ್ನೇ ಗುರುರಾಜರೂ ಮಾಡಿದಂತಾಗಲಿಲ್ಲವೇ? ಎಂದು ಭಾವ.

### ಗೀತಾವಿವೃತಿ

**गीतामत्यर्थधूतश्रितजनदुरितामिन्दुवंशप्रसूतौ**
**व्याचक्षाणे मुरद्विष्यभिजनमभजद्भद्रमिन्दोरनिद्रम् ।**
**धीर श्रीराघवेन्द्र त्वयि पुनरनघे हंसवंशोदिते तां**
**व्याकुर्वत्यद्य भव्यं कथमिव न भजेदाशु मित्रान्ववायः ॥ २५ ॥**

**ಗೀತಾಮತ್ಯರ್ಥಧೂತಶ್ರಿತಜನದುರಿತಾಮಿಂದುವಂಶಪ್ರಸೂತೌ**
**ವ್ಯಾಚಕ್ಷಾಣೇ ಮುರದ್ವಿಷ್ಯಭಿಜನಮಭಜದ್ ಭದ್ರಮಿಂದೋರನಿದ್ರಂ ।**

**ಧೀರ ಶ್ರೀರಾಘವೇಂದ್ರ ತ್ವಯಿ ಪುರನಘೇ ಹಂಸವಂಶೋದಿತೇ ತಾಂ**
**ವ್ಯಾಕುರ್ವತ್ಯದ್ಯ ಭವ್ಯಂ ಕಥಮಿವ ನ ಭಜೇದಾಶು ಮಿತ್ರಾನ್ವವಾಯಃ ॥ 25 ॥**

ಅನ್ವಯಾರ್ಥ :

ಅತ್ಯರ್ಥಧೂತಶ್ರಿತಜನದುರಿತಾಂ - ಅತ್ಯರ್ಥ= ಪೂರ್ಣವಾಗಿ ಧೂತ= ಪರಿಹರಿಸಲ್ಪಟ್ಟ, ಶ್ರಿತಜನ= ಆಶ್ರಿತಜನರ, ದುರಿತಾಂ= ಪಾಪವುಳ್ಳ, ಗೀತಾಂ= ಭಗವದ್ಗೀತೆಯನ್ನು, ಇಂದುವಂಶಪ್ರಸೂತೌ= ಚಂದ್ರವಂಶದಲ್ಲಿ ಜನಿಸಿದ, ಮುರದ್ವಿಷಿ= ಮುರಾರಿಯಾದ ಶ್ರೀಕೃಷ್ಣನು, ವ್ಯಾಚಕ್ಷಾಣೇ ಸತಿ= ಉಪದೇಶಿಸುತ್ತಿರಲು, ಇಂದೋಃ= ಚಂದ್ರನ, ಅಭಿಜನಂ= ವಂಶವು, ಅನಿದ್ರಂ= ಶಾಶ್ವತವಾದ, ಭದ್ರಂ= ಮಂಗಳವನ್ನು, ಅಭಜತ್= ಪಡೆಯಿತು. ಧೀರಶ್ರೀರಾಘವೇಂದ್ರ!= ಜ್ಞಾನಿಗಳಾದ ಗುರುರಾಜರೇ!, ಹಂಸವಂಶೋದಿತೇ= ಪರಮಹಂಸರ ವಂಶದಲ್ಲಿ ಜನಿಸಿದ, ಅನಘೇ= ನಿರ್ದುಷ್ಟರಾದ, ತ್ವಯಿ ಪುನಃ= ನೀವಾದರೂ, ಅದ್ಯ= ಇಂದು, ತಾಂ= ಆ ಗೀತೆಯನ್ನು, ವ್ಯಾಕುರ್ವತಿ ಸತಿ= ವ್ಯಾಖ್ಯಾನ ಮಾಡುತ್ತಿರಲು, ಮಿತ್ರಾನ್ವವಾಯಃ= ಸೂರ್ಯವಂಶವು, ಭವ್ಯಂ= ಮಂಗಳವನ್ನು, ಆಶು= ಕೂಡಲೇ, ಕಥಮಿವ ನ ಭಜೇತ್= ಹೇಗೆ ತಾನೆ ಪಡೆಯಲಾರದು.

ಭಾವಾರ್ಥ :

ಚಂದ್ರವಂಶದಲ್ಲಿ ಅವತರಿಸಿದ ಕೃಷ್ಣನು ಗೀತೋಪದೇಶ ಮಾಡಿದಾಗ ಇದು ನಮ್ಮ ವಂಶದ ಕೊಡುಗೆ ಎಂದು ಚಂದ್ರವಂಶವು ಸಂತೋಷಗೊಂಡಿತು. ಚಂದ್ರವಂಶಕ್ಕೆ ಮಂಗಳವಾಯಿತು ನಿಜ. ಆದರೆ ಹಂಸವಂಶದಲ್ಲಿ ಬಂದ ಗುರುರಾಜರು ಅದಕ್ಕೆ ಗೀತಾವಿವೃತಿ ಎಂಬ ವ್ಯಾಖ್ಯೆಯನ್ನು ಬರೆದಾಗ ಸೂರ್ಯವಂಶವೂ ಮಂಗಳವನ್ನು ಹೊಂದಿತು. ಏಕೆಂದರೆ ಹಂಸಶಬ್ದಕ್ಕೆ ಸಂನ್ಯಾಸಿ ಎಂಬುದು ಒಂದು ಅರ್ಥವಾದರೆ ಸೂರ್ಯ ಎಂಬ ಮತ್ತೊಂದು

ಅರ್ಥವೂ ಇದೆ. ಆ ದೃಷ್ಟಿಯಲ್ಲಿ ಗುರುರಾಜರು ಸೂರ್ಯವಂಶದವರೆಂದು ಕವಿಗಳು ಚಮತ್ಕಾರ ತೋರಿಸಿದ್ದಾರೆ. ಮಿತ್ರಶಬ್ದಕ್ಕೆ ಸೂರ್ಯ ಎಂಬ ಅರ್ಥವಿರುವಂತೆ ಸ್ನೇಹಿತರು ಎಂಬ ಅರ್ಥವೂ ಇರುವುದರಿಂದ ಗುರುರಾಜರಲ್ಲಿ ಸ್ನೇಹರೂಪ ಭಕ್ತಿಯುಳ್ಳವರೆಲ್ಲರೂ ಅವರ ಗೀತಾವಿವೃತಿಯ ವಠನದಿಂದ ಶುಭವನ್ನು ಪಡೆದರು ಎಂಬುದು ಇಲ್ಲಿಯ ಅಭಿಪ್ರಾಯ.

### ಪ್ರಮೇಯದೀಪಿಕಾವ್ಯಾಖ್ಯಾನ

न स्यादीशप्रसादो गुरुवरकरुणामन्तरेणेतिरूढो
धीर श्रीराघवेन्द्र व्रतिवर सुहृढश्चेतसस्ते विपाकः ।
येन व्याख्याय गीतामपि गुरुचरणोदारतद्भाष्यटीका-
व्याख्या विख्यातविद्वन्मणिगणविनुताकारि भूयस्त्वयैव ॥ २६ ॥

**ನ ಸ್ಯಾದೀಶಪ್ರಸಾದೋ ಗುರುವರಕರುಣಾಮಂತರೇಣೇತಿ ರೂಢೋ**
**ಧೀರ ಶ್ರೀ ರಾಘವೇಂದ್ರ ವ್ರತಿವರ ಸುದೃಢಶ್ಚೇತಸಸ್ತೇ ವಿಪಾಕಃ ।**
**ಯೇನ ವ್ಯಾಖ್ಯಾಯ ಗೀತಾಮಪಿ ಗುರುಚರಣೋದಾರ ತದ್ಭಾಷ್ಯಟೀಕಾ**
**ವ್ಯಾಖ್ಯಾವಿಖ್ಯಾತ ವಿದ್ವನ್ಮಣಿಗಣ ವಿನುತಾಕಾರಿ ಭೂಯಸ್ತ್ವಯೈವ ॥ 26 ॥**

ಅನ್ವಯಾರ್ಥ :

ಧೀರಶ್ರೀರಾಘವೇಂದ್ರವ್ರತಿವರ!= ಜ್ಞಾನಿಗಳಾದ ರಾಘವೇಂದ್ರಯತಿಪುಂಗವರೇ!, ಯೇನ= ಯಾವ ಕಾರಣದಿಂದ, ತ್ವಯೈವ= ನಿಮ್ಮಿಂದಲೇ, ಗೀತಾಂ= ಭಗವದ್ಗೀತೆಯನ್ನು, ವ್ಯಾಖ್ಯಾಯ ಅಪಿ= ವ್ಯಾಖ್ಯಾನ ಮಾಡಿಯೂ ಕೂಡ, ಭೂಯಃ= ಪುನಃ, ವಿಖ್ಯಾತವಿದ್ವನ್ಮಣಿಗಣವಿನುತಾ= ಪ್ರಖ್ಯಾತ ವಿದ್ವನ್ಮಣಿಗಳ ಸಮೂಹದಿಂದ ಸ್ತುತ್ಯವಾದ, ಗುರುಚರಣೋದಾರತದ್ಭಾಷ್ಯಟೀಕಾವ್ಯಾಖ್ಯಾ -

ಗುರುಚರಣ= ಗುರುಪಾದರಾದ ಶ್ರೀಜಯತೀರ್ಥರ, ಉದಾರ= ಉತ್ಕೃಷ್ಟವಾದ, ತದ್ಭಾಷ್ಯಟೀಕಾ= ಗೀತಾಭಾಷ್ಯಟೀಕೆಯಾದ ಪ್ರಮೇಯದೀಪಿಕೆಯ, ವ್ಯಾಖ್ಯಾ= ವ್ಯಾಖ್ಯಾನವು, ಅಕಾರಿ= ಮಾಡಲ್ಪಟ್ಟಿತೋ, ತೇನ= ಆ ಕಾರಣದಿಂದ, ಗುರುವರಕರುಣಾಂ ಅಂತರೇಣ= ಗುರುವರೇಣ್ಯರ ಕಾರುಣ್ಯವಿಲ್ಲದೇ, ಈಶಪ್ರಸಾದಃ= ಭಗವದನುಗ್ರಹವು, ನ ಸ್ಯಾತ್= ಆಗಲಾರದು. ಇತಿ= ಎಂಬ, ತೇ= ನಿಮ್ಮ, ಚೇತಸಃ ವಿಪಾಕಃ= ಭಾವನೆಯು, ಸುದೃಢಃ ರೂಢಃ= ದೃಢವಾಗಿ ಬೆಳೆದಿದೆ. (ಎಂದು ತಿಳಿಯುವುದು).

ಭಾವಾರ್ಥ :

ಶ್ರೀಗುರುರಾಜರು ಗೀತಾವಿವೃತಿಯನ್ನು ರಚಿಸಿದವರಾದರೂ ಪುನಃ ಶ್ರೀಜಯತೀರ್ಥರ ಕಾರುಣ್ಯವನ್ನು ಸಂಪಾದಿಸಲು ಅವರ 'ಪ್ರಮೇಯದೀಪಿಕಾ' ಎಂಬ ಗೀತಾಭಾಷ್ಯಟೀಕೆಗೆ ಟಿಪ್ಪಣಿಯನ್ನು ರಚಿಸಿದ್ದಾರೆ. ಇದರಿಂದ ಗುರುಪ್ರಸಾದವಾಗದೇ ಹರಿಪ್ರಸಾದವಾಗುವುದಿಲ್ಲ ಎಂಬ ಭಾವನೆಯು ಗುರುರಾಜರಲ್ಲಿ ರೂಢಮೂಲವಾಗಿದೆ ಎಂದು ತಿಳಿಯುತ್ತದೆ.

ನ್ಯಾಯದೀಪಿಕಾವ್ಯಾಖ್ಯಾನ

नानातन्त्रप्रसङ्गत्रिभुवनविदितोदारसारस्वतोऽपि
प्रज्ञानेकप्रबन्धप्रवचनरचनाविस्ततत्कौशलोऽपि ।
शश्वद्व्याख्यातगीताकृतिरपि विबुधानुग्रहैकाग्रचित्तो
गीतातात्पर्यटीकाविवरणमकरोदद्भुतं राघवेन्द्रः ॥ २७ ॥

ನಾನಾತಂತ್ರಪ್ರಸಂಗತ್ರಿಭುವನವಿದಿತೋದಾರಸಾರಸ್ವತೋऽಪಿ
ಪ್ರಜ್ಞಾನೇಕಪ್ರಬಂಧಪ್ರವಚನರಚನಾವಿಸ್ತತತ್ಕೌಶಲೋऽಪಿ

**ಶಶ್ವದ್ ವ್ಯಾಖ್ಯಾತಗೀತಾಕೃತಿರಪಿ ವಿಬುಧಾನುಗ್ರಹೈಕಾಗ್ರಚಿತ್ತೋ 
ಗೀತಾತಾತ್ಪರ್ಯಟೀಕಾವಿವರಣಮಕರೋದದ್ಭುತಂ ರಾಘವೇಂದ್ರಃ ॥27॥**

ಅನ್ವಯಾರ್ಥ :

ರಾಘವೇಂದ್ರಃ= ಶ್ರೀಗುರುರಾಜರು, ನಾನಾತಂತ್ರಪ್ರಸಂಗತ್ರಿಭುವನವಿದಿತೋದಾರಸಾರಸ್ವತೋಽಪಿ - ನಾನಾತಂತ್ರ= ನಾನಾವಿಧವಾದ ಶಾಸ್ತ್ರಗಳ, ಪ್ರಸಂಗ= ಉಪನ್ಯಾಸದಿಂದ, ತ್ರಿಭುವನ= ಮೂರುಲೋಕದಲ್ಲಿ, ವಿದಿತ= ಪ್ರಸಿದ್ಧವಾದ, ಉದಾರ= ಉತ್ಕೃಷ್ಟವಾದ, ಸಾರಸ್ವತೋಽಪಿ= ಪಾಂಡಿತ್ಯವುಳ್ಳವರಾಗಿದ್ದರೂ, ಪ್ರತ್ನಾನೇಕಪ್ರಬಂಧಪ್ರವಚನರಚನಾವಿತ್ತತತ್ಕೌಶಲೋಽಪಿ - ಪ್ರತ್ನ= ಪ್ರಾಚೀನವಾದ, ಅನೇಕ= ಬಹಳವಾದ, ಪ್ರಬಂಧ= ಗ್ರಂಥಗಳ, ಪ್ರವಚನ= ವ್ಯಾಖ್ಯಾನದ, ರಚನಾ= ರಚನೆಯಿಂದ, ವಿತ್ತ= ತಿಳಿಯಲ್ಪಟ್ಟ, ತತ್ಕೌಶಲೋಽಪಿ= ವ್ಯಾಖ್ಯಾನರಚನೆಯ ನೈಪುಣ್ಯ ಉಳ್ಳವರಾಗಿದ್ದರೂ, ಶಶ್ವದ್ವ್ಯಾಖ್ಯಾತಗೀತಾಕೃತಿರಪಿ- ಶಶ್ವತ್= ಅನೇಕಬಾರಿ, ವ್ಯಾಖ್ಯಾತ= ವ್ಯಾಖ್ಯಾನ ಮಾಡಲ್ಪಟ್ಟ, ಗೀತಾಕೃತಿರಪಿ= ಗೀತೆ ಎಂಬ ಕೃತಿಯುಳ್ಳವಾರದರೂ, ವಿಬುಧಾನುಗ್ರಹೈಕಾಗ್ರಚಿತ್ತಃ - ವಿಬುಧ= ಪಂಡಿತರಿಗೆ, ಅನುಗ್ರಹ= ಅನುಗ್ರಹವಮಾಡುವುದರಲ್ಲಿ ಏಕಾಗ್ರಚಿತ್ತಃ= ಏಕಾಗ್ರಮನಸ್ಸುಳ್ಳವರಾಗಿ, ಅದ್ಭುತಂ= ಆಶ್ಚರ್ಯಕರವಾದ, ಗೀತಾತಾತ್ಪರ್ಯಟೀಕಾವಿವರಣಂ - ಗೀತಾತಾತ್ಪರ್ಯ= ಆಚಾರ್ಯವಿರಚಿತವಾದ ಗೀತಾ ತಾತ್ಪರ್ಯದ, ಟೀಕಾ= ಟೀಕೆಯಾದ ನ್ಯಾಯದೀಪಿಕಾ ಗ್ರಂಥಕ್ಕೆ, ವಿವರಣಂ= ವ್ಯಾಖ್ಯಾನವನ್ನು, ಅಕರೋತ್= ಮಾಡಿದರು.

ಭಾವಾರ್ಥ :

ಶ್ರೀಗುರುರಾಜರು, ಆಚಾರ್ಯರ ಗೀತಾತಾತ್ಪರ್ಯಕ್ಕೆ ಜಯತೀರ್ಥರು ರಚಿಸಿದ 'ನ್ಯಾಯದೀಪಿಕಾ' ಗ್ರಂಥಕ್ಕೆ ವ್ಯಾಖ್ಯಾನವನ್ನು ರಚಿಸಿದ್ದಾರೆ. ಇದು

ಕೇವಲ ಪಂಡಿತರ ಮೇಲಿನ ದಯೆಯಿಂದ ಮಾಡಿದ ಕಾರ್ಯವೇ ಹೊರತು, ತಮ್ಮ ಪಾಂಡಿತ್ಯದ ಪ್ರಕಟನಕ್ಕಾಗಲೀ, ವ್ಯಾಖ್ಯಾನರಚನಾನೈಪುಣ್ಯದ ಪ್ರದರ್ಶನಕ್ಕಾಗಲೀ, ಗೀತೆಗೆ ವ್ಯಾಖ್ಯಾನ ರಚಿಸಿದಂತಾಗಬೇಕೆಂಬ ಉದ್ದೇಶ್ಯದಿಂದಾಗಲೀ ಅಲ್ಲ. ಏಕೆಂದರೆ ಅವರು ಶ್ರೀಹರಿಪ್ರೀತಿಗಾಗಿ ನಡೆಸಿದ ನಾನಾಶಾಸ್ತ್ರಗಳ ಉಪನ್ಯಾಸ, ಗೀತಾವಿವೃತಿ, ಪ್ರಮೇಯದೀಪಿಕಾಟಿಪ್ಪಣೀ ಇತ್ಯಾದಿಗಳಿಂದಲೇ ಲೋಕದಲ್ಲಿ ಅವರ ಪಾಂಡಿತ್ಯ ವ್ಯಾಖ್ಯಾನನೈಪುಣ್ಯ ಇವೆಲ್ಲವೂ ಪ್ರಖ್ಯಾತವಾಗಿವೆ. ಆದರೂ ಪುನಃ ಈ ಟಿಪ್ಪಣಿಯನ್ನು ರಚಿಸಿದ್ದು ಪಂಡಿತರ ಮೇಲಿನ ಅನುಗ್ರಹದಿಂದ ಎಂಬುದು ಸ್ಪಷ್ಟ

**ಖಗರ್ಥಮಂಜರೀ**

लक्ष्मीनारायणार्यस्तव तनयमणिः सत्सु सर्वेषु धन्यो
यस्माद्दग्भाष्यटीकातनुतरविवृतेरञ्जसा तत्कृतायाः ।
प्रेम्णा विद्वत्सु भूयः प्रचयमभिलषन् राघवेन्द्रव्रतीन्द्र
प्रावोचस्त्वं प्रतीतव्रत निचयमृचामेव भाष्यानुरोधात् ॥ २८ ॥

**ಲಕ್ಷ್ಮೀನಾರಾಯಣಾರ್ಯಸ್ತವ ತನಯಮಣಿಃ ಸತ್ಸು ಸರ್ವೇಷು ಧನ್ಯೋ**
**ಯಸ್ಮಾದೃಗ್ಭಾಷ್ಯಟೀಕಾತನುತರವಿವೃತೇರಂಜಸಾ ತತ್ಕೃತಾಯಾಃ ।**
**ಪ್ರೇಮ್ಣಾ ವಿದ್ವತ್ಸು ಭೂಯಃ ಪ್ರಚಯಮಭಿಲಷನ್ ರಾಘವೇಂದ್ರವ್ರತೀಂದ್ರ**
**ಪ್ರಾವೋಚಸ್ತ್ವಂ ಪ್ರತೀತವ್ರತನಿಚಯಮೃಚಾಮೇವ ಭಾಷ್ಯಾನುರೋಧಾತ್**
**॥ 28 ॥**

ಅನ್ವಯಾರ್ಥ :

ಪ್ರತೀತವ್ರತ - ಪ್ರತೀತ= ಪ್ರಸಿದ್ಧವಾದ, ವ್ರತ= ಸಮಸ್ತಟೀಕಾಗ್ರಂಥಗಳನ್ನು

ವ್ಯಾಖ್ಯಾನ ಮಾಡುವ ವ್ರತವುಳ್ಳ, ರಾಘವೇಂದ್ರವ್ರತೀಂದ್ರ= ಶ್ರೀರಾಘವೇಂದ್ರ ಯತಿವರೇಣ್ಯರೇ!, ಯಸ್ಮಾತ್= ಯಾವ ಕಾರಣದಿಂದ, ತತ್ಕೃತಾಯಾಃ= ಆ ಲಕ್ಷ್ಮೀನಾರಾಯಣಾಚಾರ್ಯರಿಂದ ರಚಿಸಲ್ಪಟ್ಟ, ಋಗ್ಭಾಷ್ಯಟೀಕಾತನುತರ-ವಿವೃತೇಃ - ಋಗ್ಭಾಷ್ಯಟೀಕಾ= ಋಗ್ಭಾಷ್ಯಟೀಕೆಯ, ತನುತರ= ಸಣ್ಣದಾದ, ವಿವೃತೇಃ= ಟಿಪ್ಪಣಿಗೆ, ವಿದ್ವತ್ಸು= ಪಂಡಿತರಲ್ಲಿ, ಅಂಜಸಾ= ಚೆನ್ನಾಗಿ, ಭೂಯಃ ಪ್ರಚಯಂ= ಬಹಳವಾದ ಪ್ರಸಿದ್ಧಿಯನ್ನು, ಪ್ರೇಮ್ಣಾ= ಪ್ರೇಮದಿಂದ, ಅಭಿಲಷನ್= ಇಚ್ಛಿಸತಕ್ಕವರಾಗಿ, ತ್ವಂ= ನೀವು, ಋಚಾಂ ನಿಚಯಮೇವ= ಋಙ್ಮಂತ್ರಗಳ ಸಮೂಹವನ್ನೇ, ಭಾಷ್ಯಾನುರೋಧಾತ್= ಭಾಷ್ಯಕ್ಕನುಗುಣವಾಗಿ, ಪ್ರಾವೋಚಃ= ವಿವರಿಸಿದರೋ, ತಸ್ಮಾತ್= ಆ ಕಾರಣದಿಂದ, ತವ= ನಿಮ್ಮ, ತನಯಮಣಿಃ= ಪುತ್ರರತ್ನರಾದ, ಲಕ್ಷ್ಮೀನಾರಾಯಣಾರ್ಯಃ= ಲಕ್ಷ್ಮೀನಾರಾಯಣಾಚಾರ್ಯರು, ಸರ್ವೇಷು ಸತ್ಸು= ಎಲ್ಲ ಸಜ್ಜನರಲ್ಲಿ, ಧನ್ಯಃ= ಧನ್ಯರು.

ಭಾವಾರ್ಥ :

ಶ್ರೀಗುರುರಾಜರು ಸಮಸ್ತ ಟೀಕೆಗಳಿಗೆ ವ್ಯಾಖ್ಯಾನ ರಚಿಸುವ ವ್ರತವನ್ನು ಕೈಗೊಂಡಿದ್ದಾರೆ. ಆದರೆ ತಮ್ಮ ಮಕ್ಕಳಾದ ಲಕ್ಷ್ಮೀನಾರಾಯಣಾಚಾರ್ಯರು ಋಗ್ಭಾಷ್ಯಟೀಕೆಗೆ ರಚಿಸಿದ ಸಣ್ಣ ಟಿಪ್ಪಣಿಯು ವಿದ್ವನ್ಮಂಡಲಿಯಲ್ಲಿ ಪ್ರಖ್ಯಾತವಾಗಲಿ ಎಂಬುದಾಗಿ ಭಾವಿಸಿ ತಾವು ರಚಿಸಲಿಲ್ಲ. ಋಗ್ಭಾಷ್ಯಕ್ಕೆ ಅನುಗುಣವಾಗಿ ಋಕ್‌ಮಂತ್ರಗಳ ಅರ್ಥವನ್ನು ವಿವರಿಸುವ ಋಗರ್ಥಮಂಜರಿಯನ್ನು ಮಾತ್ರ ರಚಿಸಿದರು. ಆದ್ದರಿಂದ ಅವರಿಗೆ ಪ್ರೇಮಾಸ್ಪದ ಪುತ್ರರತ್ನರಾದ ಲಕ್ಷ್ಮೀನಾರಾಯಣಾಚಾರ್ಯರು ಧನ್ಯರಾಗಿದ್ದಾರೆ.

ಪಂಚಸೂಕ್ತವ್ಯಾಖ್ಯಾನ

हृद्यत्रय्यन्तविद्यामुखनिखिलकलातत्त्वबोधैकमूर्ते
धीर श्रीराघवेन्द्र व्रतिवर सकलान्येव सूक्तानि सम्यक् ।
व्याकुर्वन्तं भवन्तं व्यवसितमतयो हन्त निध्यासयन्तः
सर्वे भूयः स्मरन्ति व्रतिसुमतिमणेर्ब्रह्मसूत्रप्रणेतुः ॥ २९ ॥

**ಹೃದ್ಯತ್ರಯ್ಯಂತವಿದ್ಯಾಮುಖನಿಖಿಲಕಲಾತತ್ತ್ವಬೋಧೈಕಮೂರ್ತೇ**
**ಧೀರ ಶ್ರೀ ರಾಘವೇಂದ್ರ ವ್ರತಿವರ ಸಕಲಾನ್ಯೇವ ಸೂಕ್ತಾನಿ ಸಮ್ಯಕ್ ।**
**ವ್ಯಾಕುರ್ವಂತಂ ಭವಂತಂ ವ್ಯವಸಿತಮತಯೋ ಹಂತ ನಿಧ್ಯಾಸಯಂತಃ**
**ಸರ್ವೇ ಭೂಯಃ ಸ್ಮರಂತಿ ವ್ರತಿಸಮಿತಿಮಣೇರ್ಬ್ರಹ್ಮಸೂತ್ರಪ್ರಣೇತುಃ ॥29॥**

ಅನ್ವಯಾರ್ಥ :

ಹೃದ್ಯತ್ರಯ್ಯಂತವಿದ್ಯಾಮುಖನಿಖಿಲಕಲಾತತ್ತ್ವಬೋಧೈಕಮೂರ್ತೇ! - ಹೃದ್ಯ= ಮನೋಹರವಾದ, ತ್ರಯ್ಯಂತವಿದ್ಯಾ= ವೇದಾಂತವಿದ್ಯೆಯೇ, ಮುಖ= ಮೊದಲಾದ, ನಿಖಿಲ= ಎಲ್ಲ, ಕಲಾ= ವಿದ್ಯೆಗಳ, ತತ್ತ್ವಬೋಧ= ತತ್ತ್ವಜ್ಞಾನವೇ, ಏಕ= ಮುಖ್ಯವಾದ, ಮೂರ್ತೇ= ಸ್ವರೂಪವಾಗಿ ಉಳ್ಳ, ಧೀರ ಶ್ರೀರಾಘವೇಂದ್ರ-ವ್ರತಿವರ!= ಜ್ಞಾನಿಗಳಾದ ಶ್ರೀರಾಘವೇಂದ್ರಯತಿಪುಂಗವರೇ, ಸಕಲಾನ್ಯೇವ ಸೂಕ್ತಾನಿ= ಪುರುಷಸೂಕ್ತಾದಿ ಪಂಚಸೂಕ್ತಗಳನ್ನು ಸಮ್ಯಕ್= ಚೆನ್ನಾಗಿ, ವ್ಯಾಕುರ್ವಂತಂ= ವ್ಯಾಖ್ಯಾನ ಮಾಡುತ್ತಿರುವ, ಭವಂತಂ= ನಿಮ್ಮನ್ನು, (ಕಂಡು) ವ್ಯವಸಿತಮತಯಃ= ನಿಶ್ಚಿತವಾದ ಬುದ್ಧಿಯುಳ್ಳ, ಸರ್ವೇ= ಎಲ್ಲ ವಿದ್ವಾಂಸರು, ನಿಧ್ಯಾಸಯಂತಃ= ಧ್ಯಾನಮಗ್ನರಾಗಿ, ಭೂಯಃ= ಪುನಃ ಪುನಃ, ವ್ರತಿಸಮಿತಿಮಣೇಃ= ಋಷಿಸಭಾನಾಯಕರಾದ, ಬ್ರಹ್ಮಸೂತ್ರಪ್ರಣೇತುಃ= ಬ್ರಹ್ಮಸೂತ್ರಕಾರರಾದ ಶ್ರೀವ್ಯಾಸರನ್ನು, ಸ್ಮರಂತಿ= ಸ್ಮರಿಸುತ್ತಾರೆ. ಹಂತ= ಸಂತೋಷವು.

ಭಾವಾರ್ಥ :

ವೇದಾಂತವೇ ಮೊದಲಾದ ಸಕಲಕಲೆಗಳ ತತ್ತ್ವಜ್ಞಾನವೇ ಮೂರ್ತಿಮತ್ತಾಗಿ ಬಂದಂತಿರುವ ಶ್ರೀಗುರುರಾಜರು ಪುರುಷಸೂಕ್ತಾದಿ ಪಂಚಸೂಕ್ತಗಳ ವ್ಯಾಖ್ಯಾನ ಮಾಡಿದ್ದನ್ನು ಕಂಡು ಋಷಿನಭಾನಾಯಕರಾದ ಶ್ರೀವೇದವ್ಯಾಸದೇವರನ್ನು ಸ್ಮರಿಸಿಕೊಳ್ಳುತ್ತಾರೆ.

ಉಪನಿಷತ್‌ಖಂಡಾರ್ಥ

याद्दग्वेदान्तखण्डप्रवचनकृतिनि प्रेमभूमा न तादृक्
सर्वाम्नायप्रवक्तर्यनुपमचरिते राघवेन्द्रव्रतीन्द्रे ।
इत्येतद्देहभाजामतिविशदरुचौ जागरूकेऽपि लोके
राकाचन्द्रे द्वितीयाशशिशकलनतिन्यायमेवानुरुन्धे ॥ ३० ॥

**ಯಾದೃಗ್ವೇದಾಂತಖಂಡಪ್ರವಚನಕೃತಿನಿ ಪ್ರೇಮಭೂಮಾ ನ ತಾದೃಕ್**
**ಸರ್ವಾಮ್ನಾಯಪ್ರವಕ್ತರ್ಯನುಪಮಚರಿತೇ ರಾಘವೇಂದ್ರವ್ರತೀಂದ್ರೇ ।**
**ಇತ್ಯೇತದ್ದೇಹಭಾಜಾಮತಿವಿಶದರುಚೌ ಜಾಗರೂಕೇಽಪಿ ಲೋಕೇ**
**ರಾಕಾಚಂದ್ರೇ ದ್ವಿತೀಯಾಶಶಿಶಕಲನತಿನ್ಯಾಯಮೇವಾನುರುಂಧೇ ॥ 30 ॥**

ಅನ್ವಯಾರ್ಥ :

ವೇದಾಂತಖಂಡಪ್ರವಚನಕೃತಿನಿ – ವೇದಾಂತ= ಉಪನಿಷತ್ತುಗಳ, ಖಂಡಪ್ರವಚನ-ಕೃತಿನಿ= ಖಂಡಾರ್ಥವಿವರಣೆಯಿಂದ ಧನ್ಯರಾದ, ರಾಘವೇಂದ್ರವ್ರತೀಂದ್ರೇ= ರಾಘವೇಂದ್ರಗುರುಸಾರ್ವಭೌಮರಲ್ಲಿ, ಯಾದೃಕ್= ಎಂತಹ, ಪ್ರೇಮಭೂಮಾ= ಪ್ರೇಮಾತಿಶಯವು, ಅಭೂತ್= ಆಯಿತೋ, ತಾದೃಕ್= ಅಂತಹ ಪ್ರೇಮಾತಿ-ಶಯವು, ಸರ್ವಾಮ್ನಾಯಪ್ರವಕ್ತರಿ= ಸಕಲವೇದಾರ್ಥವನ್ನು ವಿವರಿಸಿದ, ಅನುಪಮ

**ಚರಿತೇ= ಅಸದೃಶವಾದ ಚರಿತ್ರೆಯುಳ್ಳ ಅವರಲ್ಲಿ, ನ ಅಭೂತ್ ಇತಿ ಏತತ್= ಆಗಲಿಲ್ಲವೆಂಬ ಈ ಸಂಗತಿಯು, ಲೋಕೇ= ಲೋಕದಲ್ಲಿ, ಅತಿವಿಶದರುಚೌ= ಅತಿಸ್ಫುಟವಾದ ಕಾಂತಿಯುಳ್ಳ, ರಾಕಾಚಂದ್ರೇ= ಪೂರ್ಣಿಮಾ ಚಂದ್ರನು, ಜಾಗರೂಕೇಽಪಿ= ಜಾಗರೂಕನಾಗಿದ್ದರೂ, ದೇಹಭಾಜಾಂ= ಮಾನವರ, ದ್ವಿತೀಯಾಶಶಿಕಲನನ್ಯಾಯಮೇವ= ಬಿದಿಗೆಚಂದ್ರದರ್ಶನ ನ್ಯಾಯವನ್ನೇ, ಅನುರುಂಧೇ= ಅನುಸರಿಸುತ್ತದೆ.**

**ಭಾವಾರ್ಥ :**

ಶ್ರೀರಾಘವೇಂದ್ರ ಗುರುಸಾರ್ವಭೌಮರು ಸಕಲ ವೇದವ್ಯಾಖ್ಯಾನವನ್ನು ಮಾಡಿದಾಗಲೂ ಅವರಲ್ಲಿ ವ್ಯಕ್ತಪಡಿಸದಿರುವ ಪ್ರೇಮಾತಿಶಯವನ್ನು ಅವರು ಕೆಲವೇ ಉಪನಿಷತ್‌ಗಳ ಖಂಡಾರ್ಥವನ್ನು ರಚಿಸಿದಾಗ ವ್ಯಕ್ತಪಡಿಸಿದ ಸಂಗತಿಯು ಲೋಕದಲ್ಲಿ ಜನರು ಪೂರ್ಣಿಮಾ ಪೂರ್ಣಚಂದ್ರನನ್ನು ಬಿಟ್ಟು ಧರ್ಮಶಾಸ್ತ್ರದ ಪ್ರಕಾರ ಶುಕ್ಲಪಕ್ಷದ ಬಿದಿಗೆಯ ಚಂದ್ರನ ಕಲಾದರ್ಶನ ಮಾಡುವುದಕ್ಕೆ ಸಮಾನವಾಗಿದೆ.

### ವೇದತ್ರಯ ವಿವೃತಿ

**हृद्या टीकानवद्या परविवृतयजुःसामसम्बन्धिनी ते**
**मालिन्यक्षालनाम्भः स्वयमजनि हरेरुत्तराङ्गे च मूर्ध्नि ।**
**सैवर्चां राघवेन्द्र व्रतिसुमतिमणेऽनन्यसम्पर्कभाजा-**
**मोजिष्टे दक्षिणाङ्गे मृगमदमिलितोदारपाटीरसारः ॥ ३१ ॥**

**ಹೃದ್ಯಾ ಟೀಕಾನವದ್ಯಾ ಪರವಿವೃತಯಜುಃ ಸಾಮಸಂಬಂಧಿನೀ ತೇ**
**ಮಾಲಿನ್ಯಕ್ಷಾಲನಾಂಭಃ ಸ್ವಯಮಜನಿ ಹರೇರುತ್ತರಾಂಗೇ ಚ ಮೂರ್ಧ್ನಿ**

**ಸ್ವೈವರ್ಚಾಂ ರಾಘವೇಂದ್ರ ವ್ರತಿಸಮಿತಿಮಣೇऽನನ್ಯ ಸಂಪರ್ಕಭಾಜಾಂ**
**ಓಜಿಷ್ಠೇ ದಕ್ಷಿಣಾಂಗೇ ಮೃಗಮದಮಿಲಿತೋದಾರಪಾಟೀರಸಾರಃ ॥ 31 ॥**

ಅನ್ವಯಾರ್ಥ :

ರಾಘವೇಂದ್ರವ್ರತಿಸುಮತಿಮಣೇ= ಜ್ಞಾನಿಶ್ರೇಷ್ಠರಾದ ಶ್ರೀರಾಘವೇಂದ್ರಯತಿ-ಶ್ರೇಷ್ಠರೇ!, ಪರವಿವೃತಯಜುಸ್ಸಾಮಸಂಬಂಧಿನೀ - ಪರವಿವೃತ= ಇತರಮತೀಯರಿಂದ ವಿವರಿಸಲ್ಪಟ್ಟ, ಯಜುಸ್ಸಾಮಸಂಬಂಧಿನೀ= ಯಜುರ್ವೇದ ಮತ್ತು ಸಾಮವೇದಗಳಿಗೆ ಸಂಬಂಧಿಸಿದ, ಹೃದ್ಯಾ= ಮನೋಹರವಾದ, ಅನವದ್ಯಾ= ನಿರ್ದುಷ್ಟವಾದ, ತೇ ಟೀಕಾ= ನಿಮ್ಮ ಟೀಕೆಯು, ಸ್ವಯಂ= ತಾನು, ಹರೇಃ= ಪರಮಾತ್ಮನ, ಮೂರ್ಧ್ನಿ= ತಲೆಯಲ್ಲಿ, ಉತ್ತರಾಂಗೇ ಚ= ಎಡಪಾರ್ಶ್ವದಲ್ಲಿಯೂ, ಮಾಲಿನ್ಯಕ್ಷಾಲನಾಂಭಃ= ಮಲಾಪಕರ್ಷಣಸ್ನಾನದ ಜಲವು, ಅಜನಿ= ಆಯಿತು. ಅನನ್ಯಸಂಪರ್ಕಭಾಜಾಂ= ಮತಾಂತರದವರ ವ್ಯಾಖ್ಯಾನಸಂಪರ್ಕವಿಲ್ಲದ, ಋಚಾಂ= ಋಗ್ವೇದದ, ಸ್ವೈವ= ನಿಮ್ಮ ವಿವೃತಿಯು, ಓಜಿಷ್ಠೇ= ದೇದೀಪ್ಯಮಾನವಾದ, ದಕ್ಷಿಣಾಂಗೇ= ಬಲಪಾರ್ಶ್ವದಲ್ಲಿ, ಮೃಗಮದಮಿಲಿತೋ-ದಾರಪಾಟೀರಸಾರಃ - ಮೃಗಮದ= ಕಸ್ತೂರಿಯಿಂದ, ಮಿಲಿತ= ಮಿಶ್ರವಾದ, ಉದಾರ= ಉತ್ಕೃಷ್ಟವಾದ, ಪಾಟೀರಸಾರಃ= ಗಂಧೋದಕವು, ಅಜನಿ= ಆಯಿತು.

ಭಾವಾರ್ಥ :

ಯಜುರ್ವೇದ ಹಾಗೂ ಸಾಮವೇದಗಳಿಗೆ ಪರಕೀಯರು ಅಪವ್ಯಾಖ್ಯಾನ ಮಾಡಿದ್ದಾರೆ. ಆ ಅಪವ್ಯಾಖ್ಯಾನವೆಂಬ ಮಾಲಿನ್ಯವನ್ನು ತೊಳೆಯಲು ಶ್ರೀಗುರುರಾಜರು ಅವುಗಳಿಗೆ ಟೀಕೆಯನ್ನು ಬರೆದಿದ್ದಾರೆ. ಇದರಿಂದ ಭಗವಂತನ ತಲೆ ಮತ್ತು ಬಲಪಾರ್ಶ್ವಗಳಲ್ಲಿ ಮಲಾಪಕರ್ಷಣ ಸ್ನಾನ ಮಾಡಿಸಿದಂತಾಯಿತು. 'ತಸ್ಯ ಯಜುರೇವ ಶಿರಃ' ಎಂಬ ಶ್ರುತಿವಾಕ್ಯದಂತೆ.

ಯಜುರ್ವೇದದಲ್ಲಿ ಭಗವಂತನ ಶಿರಸ್ಸು ಹಾಗೂ 'ಸಾಮೋತ್ತರಃ ಪಕ್ಷಃ' ಎಂಬ ಶ್ರುತಿಯಂತೆ ಸಾಮವೇದದಲ್ಲಿ ಭಗವಂತನ ಎಡಪಾರ್ಶ್ವವೂ ಸಂನಿಹಿತವಾಗಿದೆ. ಋಗ್ವೇದಕ್ಕೆ ಪರಕೀಯರಾರು ವ್ಯಾಖ್ಯಾನ ಮಾಡಿಲ್ಲ. ಆದ್ದರಿಂದ ರಾಯರು ಅದಕ್ಕೆ ಬರೆದ ಟೀಕೆಯು 'ಋಕ್ ದಕ್ಷಿಣಃ ಪಕ್ಷಃ' ಎಂಬ ಶ್ರುತಿಗನುಸಾರವಾಗಿ ಋಗ್ವೇದದಲ್ಲಿರುವ ಭಗವಂತನ ದಕ್ಷಿಣಪಾರ್ಶ್ವಕ್ಕೆ ಗಂಧೋದಕವಾಗಿದೆ ಎಂದು ಗುರುರಾಜರು ರಚಿಸಿದ ವೇದತ್ರಯ ವಿವೃತಿಯನ್ನು ವರ್ಣಿಸಿದ್ದಾರೆ.

### *ದಶಪ್ರಕರಣಟೀಕಾ ಟಿಪ್ಪಣಿ*

**नूनं वाक्यानुरोधि प्रकरणमखिलं नेयमित्युक्तमुच्चैः**
**प्राचा वाचंयमेन प्रकटितविभवानन्तवेदान्तवाचा ।**
**स्वामिन्नेतत्प्रतीयुः कथमिव कवयो राघवेन्द्र व्रतीन्दो**
**येन त्वद्वाक्यजातं प्रकरणमखिलं तावदद्यानुरुन्धे ॥ ३२ ॥**

**ನೂನಂ ವಾಕ್ಯಾನುರೋಧಿಪ್ರಕರಣಮಖಿಲಂ ನೇಯಮಿತ್ಯುಕ್ತಮುಚ್ಚೈಃ**
**ಪ್ರಾಚಾ ವಾಚಂಯಮೇನ ಪ್ರಕಟಿತವಿಭವಾನಂತವೇದಾಂತವಾಚಾ ।**
**ಸ್ವಾಮಿನ್ನೇತತ್ಪ್ರತೀಯುಃ ಕಥಮಿವ ಕವಯೋ ರಾಘವೇಂದ್ರವ್ರತೀಂದೋ**
**ಯೇನ ತ್ವದ್ವಾಕ್ಯಜಾತಂ ಪ್ರಕರಣನಿಕರಂ ತಾವದದ್ಯಾನುರುಂಧೇ ॥ 32 ॥**

ಅನ್ವಯಾರ್ಥ :

ಪ್ರಕಟಿತವಿಭವಾನಂತವೇದಾಂತವಾಚಾ - ಪ್ರಕಟಿತ= ಪ್ರಕಾಶಗೊಳಿಸಲ್ಪಟ್ಟ, ವಿಭವ= ತನ್ನ ವೈಭವವುಳ್ಳ, ಅನಂತ= ಅಪರಿಮಿತವಾದ, ವೇದಾಂತ= ವೇದ ಉಪನಿಷತ್ತುಗಳ, ವಾಚಾ= ನಿರ್ಣಾಯಕವಾದ ಬ್ರಹ್ಮಸೂತ್ರಗಳುಳ್ಳ, ಪ್ರಾಚಾ= ಪ್ರಾಚೀನರಾದ, ವಾಚಂಯಮೇನ= ಮುನಿಗಳಾದ ಶ್ರೀವೇದವ್ಯಾಸರಿಂದ, ಅಖಿಲಂ

**ಪ್ರಕರಣಂ= ಎಲ್ಲ ಪ್ರಕರಣವು, ವಾಕ್ಯಾನುರೋಧಿ= ವಾಕ್ಯಾನುಗುಣವಾಗುವಂತೆ, ನೇಯಂ= ವಿವರಿಸಲ್ಪಡಬೇಕು, ಇತಿ= ಎಂಬುದಾಗಿ, ಉಚ್ಚೈಃ= ನಿಶ್ಚಯಾತ್ಮಕವಾಗಿ, ಉಕ್ತಂ= ಹೇಳಲ್ಪಟ್ಟಿದೆ. ಸ್ವಾಮಿನ್= ಪೂಜ್ಯರಾದ, ರಾಘವೇಂದ್ರವ್ರತೀಂದೋಃ= ರಾಘವೇಂದ್ರಯತಿಚಂದ್ರಮರೇ!, ಯೇನ= ಯಾವ ಕಾರಣದಿಂದ, ಅದ್ಯ= ಈವಾಗ, ತ್ವದ್ವಾಕ್ಯಜಾತಂ ತಾವತ್= ನಿಮ್ಮ ವಾಕ್ಯಸಮೂಹವಾದರೂ, ಅಖಿಲಂ ಪ್ರಕರಣಂ= ಎಲ್ಲ ಪ್ರಕರಣವನ್ನು, ಅನುರುಂಧೇ= ಅನುಸರಿಸುತ್ತಿದೆಯೋ, ತೇನ= ಆ ಕಾರಣದಿಂದ, ಏತತ್= ಪ್ರಕರಣವು ವಾಕ್ಯಾನುಸಾರಿಯಾಗಬೇಕೆಂಬ ಈ ಪ್ರಮೇಯವನ್ನು, ಕವಯಃ= ಪಂಡಿತರು, ಕಥಮಿವ= ಹೇಗೆ ತಾನೆ, ಪ್ರತೀಯುಃ= ನಂಬಿಯಾರು?**

**ಭಾವಾರ್ಥ :**

ಬ್ರಹ್ಮಸೂತ್ರಗಳನ್ನು ರಚಿಸಿದ ವ್ಯಾಸರು ಪ್ರಕರಣವು ವಾಕ್ಯಾನುಸಾರಿಯಾಗಬೇಕೆಂದಿದ್ದಾರೆ. ಆದರೆ ಗುರುರಾಜರೇ ನಿಮ್ಮ ದಶಪ್ರಕರಣಟೀಕಾ ಟಿಪ್ಪಣಿವಾಕ್ಯಗಳೆಲ್ಲವೂ ಪ್ರಕರಣಾನುಸಾರಿ ಆಗಿರುವುದರಿಂದ ವ್ಯಾಸರ ಮಾತನ್ನು ಹೇಗೆ ಸರಿವಡಿಸಬೇಕೆಂದು ಕವಿಗಳು ಸಂದೇಹ ವ್ಯಕ್ತಪಡಿಸಿದ್ದಾರೆ. ವಸ್ತುತಃ ಇಲ್ಲಿ ಸಂದೇಹವಿಲ್ಲ. ಚಮತ್ಕಾರ ಮಾಡಿದ್ದಾರೆ. ವ್ಯಾಸರು ಹೇಳಿದ ವಾಕ್ಯ ಮತ್ತು ಪ್ರಕರಣ ಎಂದರೆ ಶ್ರುತ್ಯರ್ಥನಿರ್ಣಾಯಕವಾದ ಎರಡು ಪ್ರಮಾಣಗಳು. ಅವುಗಳಲ್ಲಿ ಪ್ರಕರಣವು ವಾಕ್ಯಾನುಸಾರಿಯಾಗಬೇಕು. ಪ್ರಕೃತದಲ್ಲಿ ಪ್ರಕರಣವೆಂದರೆ ಆಚಾರ್ಯರ ಪ್ರಕರಣಗ್ರಂಥಗಳು. ವಾಕ್ಯವೆಂದರೆ ಟಿಪ್ಪಣಿವಾಕ್ಯಗಳು. ಇವು ಪ್ರಕರಣಾನುಸಾರಿಯೇ ಆಗಬೇಕೆಂಬುದು ವ್ಯಾಸರಿಗೆ ಸಮ್ಮತವೇ ಆದ್ದರಿಂದ ಸಂದೇಹಕ್ಕೆ ಅವಕಾಶವಿಲ್ಲ.

ತರ್ಕತಾಂಡವ ಟಿಪ್ಪ. ¹

विख्यातश्रीसुधीन्द्रव्रतिसुत भवता साधुगीते सुतर्के
सद्यः प्रत्यर्थिहृद्ये मुनिमणिरचिते ताण्डवे योजितार्थे ।
प्रत्याख्यातप्रकाशः समजनि भुवने हन्त चिन्तामणिस्त्वं
ब्रूहि श्रीराघवेन्द्र व्रतिविबुधमणे कस्त्वदन्यो वदान्यः ॥ ३३ ॥

ವಿಖ್ಯಾತಶ್ರೀಸುಧೀಂದ್ರವ್ರತಿಸುತ ಭವತಾ ಸಾಧುಗೀತೇ ಸುತರ್ಕೇ
ಸದ್ಯಃ ಪ್ರತ್ಯರ್ಥಿಹೃದ್ಯೇ ಮುನಿಮಣಿರಚಿತೇ ತಾಂಡವೇ ಯೋಜಿತಾರ್ಥೇ ।
ಪ್ರತ್ಯಾಖ್ಯಾತಪ್ರಕಾಶಃ ಸಮಜನಿ ಭುವನೇ ಹಂತ ಚಿಂತಾಮಣಿಸ್ತ್ವಂ
ಬ್ರೂಹಿ ಶ್ರೀರಾಘವೇಂದ್ರ ವ್ರತಿವಿಬುಧಮಣೇ ಕಸ್ತ್ವದನ್ಯೋ ವದಾನ್ಯಃ ॥ 33॥

ಅನ್ವಯಾರ್ಥ :

ವಿಖ್ಯಾತಶ್ರೀಸುಧೀಂದ್ರವ್ರತಿಸುತ= ಪ್ರಖ್ಯಾತರಾದ ಶ್ರೀಸುಧೀಂದ್ರತೀರ್ಥರ ಶಿಷ್ಯರಾದ, ಶ್ರೀರಾಘವೇಂದ್ರವ್ರತಿವಿಬುಧಮಣೇ= ಜ್ಞಾನಿವರೇಣ್ಯರಾದ ಶ್ರೀರಾಘವೇಂದ್ರಯತಿಗಳೇ!, ಭವತಾ= ನಿಮ್ಮಿಂದ, ಸುತರ್ಕೇ= ಸಮೀಚೀನ-ಯುಕ್ತಿಗಳಿಂದ ಕೂಡಿದ, ಸಾಧುಗೀತೇ= ಸಜ್ಜನರಿಂದ ಪಠಿಸಲ್ಪಟ್ಟ, ಸದ್ಯಃ ಪತ್ಯರ್ಥಿಹೃದ್ಯೇ= ಪರವಾದಿಗಳೂ ಒಪ್ಪಬಹುದಾದಂತಹ, ಮುನಿಮಣಿರಚಿತೇ= ಯತಿಶ್ರೇಷ್ಠರಾದ ವ್ಯಾಸರಾಜರಿಂದ ರಚಿತವಾದ, ತಾಂಡವೇ= ತರ್ಕತಾಂಡವ ಗ್ರಂಥವು, ಯೋಜಿತಾರ್ಥೇ ಸತಿ= ಅರ್ಥಯೋಜನೆಯ ಮೂಲಕ ವಿವರಿಸಲ್ಪ-ಡುತ್ತಿರಲು, ಚಿಂತಾಮಣಿಃ= ಚಿಂತಾಮಣಿಯು, ಭುವನೇ= ಲೋಕದಲ್ಲಿ, ಪ್ರತ್ಯಾಖ್ಯಾತಪ್ರಕಾಶಃ= ನಿರಾಕರಿಸಲ್ಪಟ್ಟ ಪ್ರಕಾಶವುಳ್ಳದ್ದು, ಸಮಜನಿ= ಆಯಿತು. ಹಂತ= ಆಶ್ಚರ್ಯವು. ತ್ವದನ್ಯಃ= ನಿಮಗಿಂತ ಬೇರೆಯಾದ, ವದಾನ್ಯಃ= ದಾನಿಗಳು, ಕಃ= ಯಾರು? ತ್ವಂ ಬ್ರೂಹಿ= ನೀವೇ ಹೇಳಿ.

ಭಾವಾರ್ಥ :

ಶ್ರೀವ್ಯಾಸರಾಜರು ಕುತರ್ಕಶಾಸ್ತ್ರವನ್ನು ಖಂಡಿಸುವಂತಹ ಸುತರ್ಕ ಬದ್ಧವಾದ ತರ್ಕತಾಂಡವ ಎಂಬ ಗ್ರಂಥವೊಂದನ್ನು ರಚಿಸಿದ್ದಾರೆ. ಶ್ರೀಗುರುರಾಜರು ಅದಕ್ಕೆ ಟಿಪ್ಪಣಿಯನ್ನು ರಚಿಸಿ ಅರ್ಥಯೋಜನೆ ಮಾಡಿದಾಗ ಗಂಗೇಶೋಪಾಧ್ಯಾಯರ ತತ್ತ್ವಚಿಂತಾಮಣಿ ಎಂಬ ತರ್ಕಶಾಸ್ತ್ರಗ್ರಂಥವು ತನ್ನ ಪ್ರಕಾಶವನ್ನು ಕಳೆದುಕೊಂಡಿತು ಎಂಬುದು ಇಲ್ಲಿ ಪ್ರಕೃತವಾದ ವಿಷಯ. ಇದನ್ನು ವರ್ಣಿಸುವ ಈ ಪದ್ಯದಲ್ಲಿ ಕವಿಗಳು 'ನಾಮಗ್ರಹಣೇ ನಾಮೈಕದೇಶಗ್ರಹಣಂ' ಎಂಬ ನ್ಯಾಯದಂತೆ 'ತಾಂಡವ' ಮತ್ತು 'ಚಿಂತಾಮಣಿ' ಶಬ್ದಗಳನ್ನು ಪ್ರಯೋಗಿಸಿದ್ದಾರೆ. ಹಾಗೆಯೇ 'ಧನ' ಎಂಬುದನ್ನೂ ತಿಳಿಸುವ 'ಅರ್ಥ' ಶಬ್ದವೂ ಇದೆ. ಅದರಂತೆ ಸಾಧುಗೀತೇ, ಸುತರ್ಕೇ, ಸದ್ಯಃಪತ್ಯರ್ಥಿಹೃದ್ಯೇ ಮುನಿಮಣಿರಚಿತೇ ಎಂಬ ದ್ವಂದ್ವಾರ್ಥಕ ಶಬ್ದಗಳ ಪ್ರಯೋಗವೂ ಇರುವುದರಿಂದ ಈ ಕೆಳಕಂಡ ಧ್ವನಿತಾರ್ಥವೂ ಲಭಿಸುತ್ತದೆ- ಸಂಗೀತ ಹಾಗೂ ವಿತರ್ಕ ಮೊದಲಾದ ಭಾವಗಳಿಂದ ಕೂಡಿದ, ಶತ್ರುಗಳಿಗೂ ಮನೋರಂಜಕವಾದ ಭರತಮುನಿಪ್ರವರ್ತಿತವಾದ (ತಾಂಡವ) ನಾಟ್ಯಕ್ಕೆ ಅಪಾರ ಧನವನ್ನು ನೀಡಿದಾಗ ದಾನಕ್ಕೆ ಹೆಸರಾದ ಚಿಂತಾಮಣಿಯೂ ನಾಚಿತು.

ಇಲ್ಲಿರುವ 'ಪ್ರತ್ಯಾಖ್ಯಾತಪ್ರಕಾಶಃ' ಎಂಬ ಪದದಿಂದ 'ಗುರುರಾಜರು ರುಚಿದತ್ತರಚಿತವಾದ ಪ್ರಕಾಶ ಎಂಬ ತತ್ತ್ವಚಿಂತಾಮಣಿವ್ಯಾಖ್ಯಾನವನ್ನೂ ಖಂಡಿಸಿದ್ದಾರೆ' ಎಂಬ ಅರ್ಥವೂ ಧ್ವನಿತವಾಗುತ್ತದೆ.

### ಗುರುರಾಜರ ಕೀರ್ತಿ

**प्रौढानेकप्रबन्धप्रवचनरचनालब्धविश्रब्धकीर्ते-**
**स्ते किं न्यायामृतस्याविवरणविधिना राघवेन्द्रायशः स्यात् ।**

यद्राज्यप्रच्यवेनाखिलभुवनपते राघवस्येव कीर्तिः
लब्धैव प्रत्युतालं गुरुचरणकृतामोदनिर्वाहजन्या ॥ ३४ ॥

ಪ್ರೌಢಾನೇಕಪ್ರಬಂಧಪ್ರವಚನರಚನಾಲಬ್ಧವಿಸ್ರಬ್ಧಕೀರ್ತೇರ್-
ಸ್ತೇ ಕಿಂ ನ್ಯಾಯಾಮೃತಸ್ಯಾವಿವರಣವಿಧಿನಾ ರಾಘವೇಂದ್ರಾಯಶಃ ಸ್ಯಾತ್?
ಯದ್ರಾಜ್ಯಪ್ರಚ್ಯವೇನಾಖಿಲಭುವನಪತೇ ರಾಘವಸ್ಯೇವ ಕೀರ್ತಿಃ
ಲಬ್ಧೈವ ಪ್ರತ್ಯುತಾಲಂ ಗುರುಚರಣಕೃತಾಮೋದನಿರ್ವಾಹಜನ್ಯಾ ॥ 34 ॥

ಅನ್ವಯಾರ್ಥ :

ರಾಘವೇಂದ್ರ!= ಶ್ರೀಗುರುರಾಜರೇ!, ಯತ್= ಯಾವ ಕಾರಣದಿಂದ, ಅಖಿಲಭುವನಪತೇಃ= ಸಮಸ್ತಲೋಕಗಳಿಗೆ ಒಡೆಯನಾದ, ರಾಘವಸ್ಯ= ರಾಮನಿಗೆ, ರಾಜ್ಯಪ್ರಚ್ಯವೇನ= ರಾಜ್ಯಭಾರದ ತ್ಯಾಗದಿಂದ, ಗುರುಚರಣಕೃತಾಮೋದ-ನಿರ್ವಾಹಜನ್ಯಾ - ಗುರುಚರಣ= ತಂದೆಯಾದ ದಶರಥನಿಗೆ, ಕೃತ= ಉಂಟು ಮಾಡಿದ, ಆಮೋದನಿರ್ವಾಹ= ಸಂತಸದ ಸ್ಥಾಪನೆಯಿಂದ, ಜನ್ಯಾ= ಉಂಟಾದ, ಕೀರ್ತಿಃ ಇವ= ಕೀರ್ತಿಯು ಹೇಗೆ ಲಭಿಸಿತೋ ಹಾಗೆ, ಪ್ರೌಢಾನೇಕ-ಪ್ರಬಂಧಪ್ರವಚನರಚನಾಲಬ್ಧವಿಸ್ರಬ್ಧಕೀರ್ತೇಃ- ಪ್ರೌಢ= ಪ್ರೌಢವಾದ, ಅನೇಕ= ಬಹಳವಾದ, ಪ್ರಬಂಧ= ಗ್ರಂಥಗಳ, ಪ್ರವಚನರಚನಾ= ವ್ಯಾಖ್ಯಾನದ ರಚನೆಯಿಂದ, ಲಬ್ಧ= ಹೊಂದಲ್ಪಟ್ಟ, ವಿಸ್ರಬ್ಧ= ವಿಸ್ತೃತವಾದ, ಕೀರ್ತೇಃ= ಕೀರ್ತಿ-ಯುಳ್ಳ, ತೇ= ನಿಮಗೆ, ನ್ಯಾಯಾಮೃತಸ್ಯ= ಶ್ರೀವ್ಯಾಸರಾಜವಿರಚಿತ ನ್ಯಾಯಾಮೃತದ, ಅವಿವರಣವಿಧಿನಾ= ವ್ಯಾಖ್ಯಾನ ಮಾಡದಿರುವುದರಿಂದ, ಪ್ರತ್ಯುತ= ಅಪಕೀರ್ತಿಗೆ ವಿರುದ್ಧವಾಗಿ, ಗುರುಚರಣಕೃತಾಮೋದನಿರ್ವಾಹಜನ್ಯಾ - ಗುರುಚರಣ= ಶ್ರೀವಿಜಯೀಂದ್ರರಿಂದ, ಕೃತ= ಮಾಡಲ್ಪಟ್ಟ, ಆಮೋದ= ಆಮೋದ ಎಂಬ ವ್ಯಾಖ್ಯಾನದ, ನಿರ್ವಾಹ= ಸ್ಥಾಪನೆಯಿಂದ, ಜನ್ಯಾ= ಜನ್ಯವಾದ, ಕೀರ್ತಿಃ ಏವ=

**ಕೀರ್ತಿಯೇ, ಲಬ್ಧಾ= ಪ್ರಾಪ್ತವಾಯಿತೋ, ತತ್= ಆ ಕಾರಣದಿಂದ, ಅಯಶಃ= ಅಪಕೀರ್ತಿಯು, ಸ್ಯಾತ್ ಕಿಂ= ಬಂದೀತೇನು?**

**ಭಾವಾರ್ಥ :**

ಸಮಸ್ತಲೋಕಗಳಿಗೊಡೆಯನಾದ ಶ್ರೀರಾಮಚಂದ್ರನಿಗೆ ಅಯೋಧ್ಯಾಧಿಪತ್ಯವನ್ನು ತೊರೆದುದರಿಂದ ಅಪಕೀರ್ತಿ ಏನೂ ಬರಲಿಲ್ಲ. ದಶರಥನಿಗೆ ಸಂತೋಷ ಉಂಟುಮಾಡಿದ್ದರಿಂದ ಕೀರ್ತಿಯೇ ಲಭಿಸಿತು. ಅದರಂತೆ ಅನೇಕ ಟಿಪ್ಪಣಿಗಳನ್ನು ರಚಿಸಿದ ಗುರುರಾಜರಿಗೆ ನ್ಯಾಯಾಮೃತ ಟಿಪ್ಪಣಿಯನ್ನು ರಚಿಸಿಲ್ಲವೆಂದು ಅಪಕೀರ್ತಿ ಬರಲಿಲ್ಲ. ಆದರೆ ಶ್ರೀವಿಜಯೀಂದ್ರರು ನ್ಯಾಯಾಮೃತಕ್ಕೆ ರಚಿಸಿದ 'ಆಮೋದ'ದ ವಾಠಪ್ರವಚನಗಳಿಂದ ಅವರಿಗೆ ಅಪಾರ ಕೀರ್ತಿಯೇ ಉಂಟಾಯಿತು.

*ಕೃಷ್ಣಚಾರಿತ್ರ್ಯಮಂಜರೀ- ರಾಮಚಾರಿತ್ರ್ಯಮಂಜರೀ*

**वाचा सङ्क्षिप्तया यद्बहुचरितमुपावर्णयस्त्वं मुरारेः**
**किञ्च श्रीराघवेन्द्र व्रतिप रघुपतेस्तेन नो विस्मयेऽहम् ।**
**किं वा दुःसाध्यमस्ति त्रिजगति महतामात्मनः पाणिपद्मे**
**पश्यामन्दोमरन्दः किल घटजनुषा चोलिराकारि सिन्धुः ॥ ३५ ॥**

**ವಾಚಾಸಂಕ್ಷಿಪ್ತಯಾ ಯದ್ಬಹುಚರಿತಮುಪಾವರ್ಣಯಸ್ತ್ವಂ ಮುರಾರೇಃ**
**ಕಿಂ ಚ ಶ್ರೀ ರಾಘವೇಂದ್ರವ್ರತಿಪ ರಘುಪತೇಸ್ತೇನ ನೋ ವಿಸ್ಮಯೇಽಹಂ ।**
**ಕಿಂ ವಾ ದುಃಸಾಧ್ಯಮಸ್ತಿ ತ್ರಿಜಗತಿ ಮಹತಾಮಾತ್ಮನಃ ಪಾಣಿಪದ್ಮೇ**
**ಪಶ್ಯಾಮಂದೋಮರಂದಃ ಕಿಲ ಘಟಜನುಷಾ ಚೋಲಿರಾಕಾರಿ ಸಿಂಧುಃ ॥35॥**

**ಅನ್ವಯಾರ್ಥ :**

**ಶ್ರೀರಾಘವೇಂದ್ರವ್ರತಿಪ= ಶ್ರೀರಾಘವೇಂದ್ರಯತಿಪುಂಗವರೇ!, ತ್ವಂ= ನೀವು, ಸಂಕ್ಷಿಪ್ತಯಾ ವಾಚಾ= ಸಂಕ್ಷಿಪ್ತ ವಾಕ್ಯಗಳ ಶೈಲಿಯಿಂದ, ಮುರಾರೇಃ= ಶ್ರೀಕೃಷ್ಣನ, ಕಿಂಚ= ಮತ್ತು, ರಘುಪತೇಃ= ಶ್ರೀರಾಮಚಂದ್ರನ, ಬಹುಚರಿತಂ= ಬಹಳವಾದ ಚರಿತ್ರೆಯನ್ನು, ಉಪಾವರ್ಣಯಃ= ವರ್ಣಿಸಿದ್ದೀರಿ. ತೇನ= ಆದರಿಂದ, ಅಹಂ= ನಾನು, ನೋ ವಿಸ್ಮಯೇ= ಆಶ್ಚರ್ಯಗೊಳ್ಳುವುದಿಲ್ಲ. ಮಹತಾಂ= ಮಹಾತ್ಮರಿಗೆ, ತ್ರಿಜಗತಿ= ಮೂರು ಲೋಕಗಳಲ್ಲಿ, ಕಿಂ ವಾ ದುಸ್ಸಾಧ್ಯಮಸ್ತಿ?= ಯಾವುದು ತಾನೆ ದುಸ್ಸಾಧ್ಯವಾಗಿದೆ? ಪಶ್ಯ= ನೋಡಿ!, ಘಟಜನುಷಾ= ಕುಂಭದಲ್ಲಿ ಜನಿಸಿದ ಅಗಸ್ತ್ಯರಿಂದ, ಅಮಂದಃ ಸಿಂಧುಃ= ಅಪಾರವಾದ ಸಮುದ್ರವು, ಆತ್ಮನಃ= ತಮ್ಮ, ಪಾಣಿಪದ್ಮೇ= ಕರಕಮಲದಲ್ಲಿ, ಮರಂದಃ ಚೋಲಿಃ= ಜೇನುಹನಿಯ ಆಪೋಶನದಂತೆ, ಆಕಾರಿ= ಮಾಡಲ್ಪಟ್ಟಿತಷ್ಟೆ!**

**ಭಾವಾರ್ಥ :**

ಸಂಕ್ಷಿಪ್ತ ಶೈಲಿಯ ಕೆಲವೇ ಪದ್ಯಗಳಿಂದ ಗುರುರಾಜರು ಶ್ರೀಕೃಷ್ಣನ ಮತ್ತು ರಾಮನ ಎಲ್ಲ ಚರಿತೆಯನ್ನು ಸಂಗ್ರಹಿಸಿ ಕೃಷ್ಣಚಾರಿತ್ರ್ಯಮಂಜರೀ ಹಾಗೂ ರಾಮಚಾರಿತ್ರ್ಯಮಂಜರೀ ಎಂಬ ಎರಡು ಪುಟ್ಟಕಾವ್ಯಗಳನ್ನು ರಚಿಸಿದ್ದಾರೆ. ಗುರುರಾಜರು ಮಹಾಮಹಿಮರಾದುದರಿಂದ ಇದು ಆಶ್ಚರ್ಯದ ಸಂಗತಿಯೇನಲ್ಲ. ಮಹಾತ್ಮರಿಗೆ ಯಾವುದು ತಾನೆ ಅಶಕ್ಯ? ಕುಂಭಸಂಭವರಾದ ಅಗಸ್ತ್ಯರು ಅಪಾರ ಸಮುದ್ರವನ್ನು ಅಂಗೈಯ ಜೇನುಹನಿಯಂತೆ ಆಪೋಶನ ತೆಗೆದುಕೊಳ್ಳಲಿಲ್ಲವೇ?

### ಭಾಟ್ಟಸಂಗ್ರಹ

**मन्त्रिश्रीनीलकण्ठाभिधमखिमणिना भट्टतन्त्रानुबन्धे**
**ग्रन्थे तावत्त्वदीये करिणि गुणविदारोपितेऽभ्यर्हणाय ।**

कीर्तिस्ते राघवेन्द्र व्रतिसुमतिमणे नूनमन्यूनवेगा
दिङ्नागानारुरुक्षुः स्वयमपि सहसाऽधावदष्टौ दिगन्तान् ॥ ३६ ॥

ಮಂತ್ರಿಶ್ರೀನೀಲಕಂಠಾಭಿಧಮಖಿಮಣಿನಾ ಭಟ್ಟತಂತ್ರಾನುಬಂಧೇ
ಗ್ರಂಥೇ ತಾವತ್ತ್ವದೀಯೇ ಕರಿಣಿ ಗುಣವಿದಾರೋಪಿತೇಭ್ಯರ್ಹಣಾಯ
ಕೀರ್ತಿಸ್ತೇ ರಾಘವೇಂದ್ರ ವ್ರತಿಸುಮತಿಮಣೇ ನೂನಮನ್ಯೂನವೇಗಾ
ದಿಙ್ನಾಗಾನಾರುರುಕ್ಷುಃ ಸ್ವಯಮಪಿ ಸಹಸಾಧಾವದಷ್ಟೌ ದಿಗಂತಾನ್ ॥36॥

ಅನ್ವಯಾರ್ಥ :

ರಾಘವೇಂದ್ರವ್ರತಿಸುಮತಿಮಣೇ= ಜ್ಞಾನಿವರೇಣ್ಯರಾದ ಗುರುರಾಜರೇ!, ಗುಣವಿದಾ= ಗುಣಗ್ರಾಹಿಗಳಾದ, ಮಂತ್ರಿಶ್ರೀನೀಲಕಂಠಾಭಿಧಮಖಿಮಣಿನಾ= ನೀಲಕಂಠದೀಕ್ಷಿತರೆಂಬ ಮಂತ್ರಿಗಳಿಂದ, ಭಟ್ಟತಂತ್ರಾನುಬಂಧೇ= ಭಾಟ್ಟಶಾಸ್ತ್ರಕ್ಕೆ ಸಂಬಂಧಿಸಿದ, ತ್ವದೀಯೇ ಗ್ರಂಥೇ= ಭಾಟ್ಟಸಂಗ್ರಹವೆಂಬ ನಿಮ್ಮ ಗ್ರಂಥವು, ಅಭ್ಯರ್ಹಣಾಯ= ಪೂಜೆಗಾಗಿ, ಕರಿಣಿ= ಆನೆಯ ಮೇಲೆ, ಆರೋಪಿತೇ ತಾವತ್= ಏರಿಸಲ್ಪಡುತ್ತಿರಲು, ತೇ ಕೀರ್ತಿಃ= ನಿಮ್ಮ ಕೀರ್ತಿಯು, ಸ್ವಯಮಪಿ= ತಾನೂ ಕೂಡ, ಅನ್ಯೂನವೇಗಾ= ಬಹಳ ವೇಗವುಳ್ಳದ್ದಾಗಿ, ದಿಙ್ನಾಗಾನ್= ದಿಗ್ಗಜಗಳನ್ನು, ಆರುರುಕ್ಷುಃ= ಏರಲು ಇಚ್ಛೆಯುಳ್ಳದ್ದಾಗಿ, ಸಹಸಾ= ಕೂಡಲೇ, ಅಷ್ಟೌ ದಿಗಂತಾನ್= ಎಂಟು ದಿಕ್ಕುಗಳ ಕೊನೆಯ ಸೀಮೆಗಳ ಕಡೆಗೆ, ನೂನಂ ಅಧಾವತ್= ಓಡಿತು.

ಭಾವಾರ್ಥ :

ಶ್ರೀ ಗುರುರಾಜರು ಪೂರ್ವಮೀಮಾಂಸಾಶಾಸ್ತ್ರಸಂಬಂಧಿಯಾದ 'ಭಾಟ್ಟ ಸಂಗ್ರಹ'ವನ್ನು ರಚಿಸಿದಾಗ ಅದನ್ನು ಅವಲೋಕಿಸಿ ಸಂತಸಗೊಂಡು, ಆ

ಶಾಸ್ತ್ರದಲ್ಲಿ ಆಸಕ್ತನಾದ ನೀಲಕಂಠ ದೀಕ್ಷಿತನೆಂಬ ಮಂತ್ರಿಯು ಅದನ್ನು ಆನೆಯ ಮೇಲೇರಿಸಿ ಮೆರವಣಿಗೆ ಮಾಡಿಸಿದನು. ಆಗ ರಾಯರ ಕೀರ್ತಿಯೂ ಕೂಡ ದಿಗ್ಗಜಗಳನ್ನೇರಿ ಮೆರೆಯಲು ಅಷ್ಟದಿಕ್ಕುಗಳಿಗೆ ಓಡಿತು.

### ಮಧ್ವಸಿದ್ಧಾಂತವೃಕ್ಷ

**व्यासेन व्युप्तबीजः श्रुतिभुवि भगवत्पादलब्धाङ्कुरश्रीः**
**प्रत्नैरीषत्प्रभिन्नोऽजनि जयमुनिना सम्यगुद्भिन्नशाखः ।**
**मौनीशव्यासराजादुदितकिसलयः पुष्पितोऽयं जयीन्द्रा-**
**दद्य श्रीराघवेन्द्राद्विलसति फलितो मध्वसिद्धान्तशाखी ॥ ३७ ॥**

**ವ್ಯಾಸೇನ ವ್ಯುಪ್ತಬೀಜಃ ಶ್ರುತಿಭುವಿ ಭಗವತ್ಪಾದಲಬ್ಧಾಂಕುರಶ್ರೀಃ**
**ಪ್ರತ್ನೈರೀಷತ್ಪ್ರಭಿನ್ನೋಽಜನಿ ಜಯಮುನಿನಾ ಸಮ್ಯಗುದ್ಭಿನ್ನಶಾಖಃ ।**
**ಮೌನೀಶವ್ಯಾಸರಾಜಾದುದಿತಕಿಸಲಯಃ ಪುಷ್ಪಿತೋಽಯಂ ಜಯೀಂದ್ರಾ-**
**ದದ್ಯ ಶ್ರೀ ರಾಘವೇಂದ್ರಾದ್ವಿಲಸತಿ ಫಲಿತೋ ಮಧ್ವಸಿದ್ಧಾಂತಶಾಖೀ ॥37॥**

ಅನ್ವಯಾರ್ಥ :

ಮಧ್ವಸಿದ್ಧಾಂತಶಾಖೀ= ಮಧ್ವಸಿದ್ಧಾಂತವೆಂಬ ವೃಕ್ಷವು ಶ್ರುತಿಭುವಿ= ವೇದವೆಂಬ ಭೂಮಿಯಲ್ಲಿ, ವ್ಯಾಸೇನ= ಶ್ರೀವೇದವ್ಯಾಸರಿಂದ. ವ್ಯುಪ್ತಬೀಜಃ= ಬಿತ್ತಲ್ಪಟ್ಟ ಬೀಜವುಳ್ಳದ್ದಾಗಿ, ಭಗವತ್ಪಾದಲಬ್ಧಾಂಕುರಶ್ರೀಃ= ಶ್ರೀಮದಾಚಾರ್ಯರಿಂದ ಪಡೆದ ಮೊಳಕೆಯೆಂಬ ಸಂಪತ್ತುಳ್ಳದ್ದಾಗಿ, ಪ್ರತ್ನೈಃ= ಪ್ರಾಚೀನಟೀಕಾಕಾರರಿಂದ, ಈಷತ್ ಪ್ರಭಿನ್ನಃ= ಸ್ವಲ್ಪ ಚಿಗುರೊಡೆದದ್ದಾಗಿ, ಜಯಮುನಿನಾ= ಶ್ರೀಮಜ್ಜಯತೀರ್ಥರಿಂದ, ಸಮ್ಯಕ್= ಚೆನ್ನಾಗಿ, ಉದ್ಭಿನ್ನಶಾಖಃ= ಬೆಳೆದ ಕೊಂಬೆಗಳುಳ್ಳದ್ದು, ಅಜನಿ= ಆಯಿತು. ಮೌನೀಶವ್ಯಾಸರಾಜಾತ್= ವ್ಯಾಸರಾಜಯತಿವರ್ಯರಿಂದ, ಉದಿತಕಿಸಲಯಃ=

ಮೂಡಿದ ಚಿಗುರೆಲೆಯುಳ್ಳದ್ದು, ಅಜನಿ= ಆಯಿತು. ಅಯಂ= ಈ ವೃಕ್ಷವು, ಜಯೀಂದ್ರಾತ್= ಶ್ರೀವಿಜಯೀಂದ್ರರಿಂದ, ಪುಷ್ಪಿತಃ= ಹೂಬಿಟ್ಟಿತು. ಅದ್ಯ= ಇಂದು, ಶ್ರೀರಾಘವೇಂದ್ರಾತ್= ಶ್ರೀರಾಘವೇಂದ್ರರಿಂದ, ಫಲಿತಃ= ಫಲಭರಿತ-ವಾಗಿ, ವಿಲಸತಿ= ಶೋಭಿಸುತ್ತದೆ.

ಭಾವಾರ್ಥ :

ಶ್ರೀಮಧ್ವಸಿದ್ಧಾಂತವೃಕ್ಷಕ್ಕೆ ಶ್ರೀಬಾದರಾಯಣರು ವೇದಭೂಮಿಯಲ್ಲಿ ಬ್ರಹ್ಮಸೂತ್ರಗಳೆಂಬ ಬೀಜ ಬಿತ್ತಿದರು. ಅದು ಸರ್ವಮೂಲನಿರ್ಮಾತೃಗಳಾದ ಮಧ್ವರಿಂದ ಮೊಳಕೆ ಕಂಡಿತು. ಪದ್ಮನಾಭತೀರ್ಥರೇ ಮೊದಲಾದವರಿಂದ ಸ್ವಲ್ಪ ಮೇಲೆ ಬಂದಿತು. ಜಯತೀರ್ಥರಿಂದ ಶಾಖೆಗಳು ಬೆಳೆದವು. ವ್ಯಾಸರಾಜರಿಂದ ಗೆಲ್ಲಿನಲ್ಲಿ ಚಿಗುರು ಮೂಡಿತು. ವಿಜಯೀಂದ್ರರಿಂದ ಹೂ ಬಿಟ್ಟಿತು. ಇಂದು ಶ್ರೀರಾಘವೇಂದ್ರರಿಂದ ಫಲಭರಿತವಾಗಿ ಶೋಭಿಸುತ್ತಿದೆ ಈ ಮಧ್ವಸಿದ್ಧಾಂತವೃಕ್ಷ.

### ಉಪಸಂಹಾರ

मायदद्वैतविद्यावद्गर्वनिर्वापणक्षमः ।
वादीन्द्रयतिराट् तेने भक्त्या गुरुगुणस्तवम् ॥ ३८ ॥

*॥ इति श्रीमत्सर्वतन्त्रस्वतन्त्रश्रीमदुपेन्द्रतीर्थगुरुपादशिष्येण श्रीमद्वादीन्द्रतीर्थेन विरचितं गुरुगुणस्तवनं समाप्तम् ॥*

ಮಾಯದದ್ವೈತವಿದ್ಯಾವದ್‌ಗರ್ವನಿರ್ವಾಪಣಕ್ಷಮಃ ।
ವಾದೀಂದ್ರಯತಿರಾಟ್ ತೇನೇ ಭಕ್ತ್ಯಾ ಗುರುಗುಣಸ್ತವಂ ॥ 38 ॥

*॥ ಇತಿ ಶ್ರೀಮತ್ಸರ್ವತಂತ್ರಸ್ವತಂತ್ರಶ್ರೀಮದುಪೇಂದ್ರತೀರ್ಥಶಿಷ್ಯೇಣ ಶ್ರೀಮದ್ವಾದೀಂದ್ರತೀರ್ಥೇನ ವಿರಚಿತಂ ಗುರುಗುಣಸ್ತವನಂ ಸಮಾಪ್ತಮ್ ॥*

**ಅನ್ವಯಾರ್ಥ :**

**ಮಾದ್ಯದದ್ವೈತವಿದ್ಯಾವದ್ಗರ್ವನಿರ್ವಾಪಣಕ್ಷಮಃ - ಮಾದ್ಯದ್= ಮದಿಸಿದ, ಅದ್ವೈತವಿದ್ಯಾವತ್= ಅದ್ವೈತವಿದ್ವಾಂಸರ, ಗರ್ವ= ಗರ್ವವನ್ನು, ನಿರ್ವಾಪಣ= ನಿರಾಸಮಾಡುವುದರಲ್ಲಿ, ಕ್ಷಮಃ= ಸಮರ್ಥರಾದ, ವಾದೀಂದ್ರಯತಿರಾಟ್= ವಾದೀಂದ್ರಯತಿರಾಜರು, ಭಕ್ತ್ಯಾ= ಭಕ್ತಿಯಿಂದ, ಗುರುಗುಣಸ್ತವಂ= ಗುರುಗುಣಸ್ತವನವನ್ನು ತೇನೇ= ಮಾಡಿದರು.**

**ಭಾವಾರ್ಥ :**

ಮದಿಸಿದ ಪರಮತಪಂಡಿತರನ್ನು ಖಂಡಿಸುವ ವಾದೀಂದ್ರಯತಿರಾಜರು ಭಕ್ತಿಯಿಂದ ಗುರುಗುಣಸ್ತವನವನ್ನು ರಚಿಸಿದರು.

-0-0-0-